ಪರಮದಯಾಮಯ ಕರುಣಾಳುವಾದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ತಮಿಳ್ನಾಡಿನ ಅಣ್ಣಾ ಡಿಎಂಕೆ ಪಕ್ಷದ ಕಾರ್ಯಕಾರಿಣಿಯ ಸದಸ್ಯ ಹಾಗೂ ತಮಿಳು ದೈನಿಕ 'ನೀರೋಟ್ಟಮ್'ನ(Neerottam) ಸಂಪಾದಕರಾಗಿದ್ದ ಅಡಿಯಾರ್ "ನಾನ್ ಕಾದಲಿಕ್ಕುಮ್ ಇಸ್ಲಾಮ್" ಎಂಬ ಲೇಖನಮಾಲೆಯೊಂದನ್ನು ತಮ್ಮ ಪತ್ರಿಕೆಯಲ್ಲಿ ಬರೆದಿದ್ದರು. ಅದರ ಕನ್ನಡಾನುವಾದವನ್ನು 'ನನ್ನ ಪ್ರೀತಿಯ ಧರ್ಮ' ಎಂಬ ಶೀರ್ಷಿಕೆಯಲ್ಲಿ ವಾಚಕರ ಮುಂದಿಡಲಾಗುತ್ತಿದೆ.

ತಮಿಳು ಭಾಷೆಯ ಉತ್ತಮ ಸಾಹಿತಿಯೂ ವಾಗ್ಮಿಯೂ ಆದ ಅಡಿಯಾರ್‌ರಿಗೆ ಬಾಲ್ಯದಿಂದಲೇ ಮುಸ್ಲಿಮ್ ಸ್ನೇಹಿತರ ಸಹವಾಸ ಲಭಿಸಿತ್ತು. ಪತ್ರಿಕಾರಂಗ ಮತ್ತು ರಾಜಕೀಯದಲ್ಲೂ ಅನೇಕ ಮುಸ್ಲಿಮರ ಸ್ನೇಹ ಸಂಪರ್ಕವಿತ್ತು. ಈ ಸ್ನೇಹ, ಸಹವಾಸಗಳು ಅವರಿಗೆ ಇಸ್ಲಾಮಿ ಜೀವನದ ಬಗ್ಗೆ ಅನೇಕ ವಿಷಯಗಳನ್ನು ಕಲಿಯುವ ಅವಕಾಶವನ್ನು ದೊರಕಿಸಿ ಕೊಟ್ಟಿದ್ದುವು. ತುರ್ತುಪರಿಸ್ಥಿತಿಯ ವೇಳೆ ಮಿಸಾದನ್ವಯ ಬಂಧಿತರಾಗಿದ್ದ ಅಡಿಯಾರ್‌ರಿಗೆ ಇಸ್ಲಾಮಿನ ಅಧ್ಯಯನದ ಮತ್ತೊಂದು ಸಂದರ್ಭ ದೊರಕಿತು. ಒಂದೂವರೆ ವರ್ಷದ ಜೈಲು ವಾಸದಲ್ಲಿ ಅವರು ಇಸ್ಲಾಮ್ ಧರ್ಮದ ಗಹನವಾದ ಅಧ್ಯಯನ ನಡೆಸಿದರು.

ಬಿಡುಗಡೆಯ ಬಳಿಕ ತನ್ನ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಬರೆದ ಈ ಲೇಖನ ಮಾಲೆಯನ್ನು ದೇಶದ ಅನೇಕ ಭಾಷೆಗಳಿಗೆ ಭಾಷಾಂತರಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ಅತ್ಯಂತ ಮನಮುಟ್ಟುವ ಶೈಲಿಯಲ್ಲಿರುವ ಅಡಿಯಾರ್‌ರ ಲೇಖನಗಳು ಸಾವಿರಾರು ಹೃದಯಗಳನ್ನು ಸೂರೆಗೊಂಡಿರುವುದು ಅದರ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಈ ಲೇಖನ ಪರಂಪರೆಯನ್ನು ಬರೆಯುವಾಗ ಅಡಿಯಾರ್ ಇಸ್ಲಾಮ್ ಸ್ವೀಕರಿಸಿರಲಿಲ್ಲ. ಅವರು 1987ರ ಜೂನ್ 6 ರಂದು ಇಸ್ಲಾಮ್ ಸ್ವೀಕರಿಸಿ ಅಬ್ದುಲ್ಲಾ ಎಂದು ನಾಮಕರಣ ಮಾಡಿಕೊಂಡರು. ನಿಷ್ಪಕ್ಷಪಾತಿಯಾದ ಓರ್ವ ಪತ್ರಕರ್ತ ಹಾಗೂ ರಾಜಕಾರಣಿಯ ಅಭಿಪ್ರಾಯಗಳೆಂಬ ನೆಲೆಯಲ್ಲಿ ಈ ಪುಸ್ತಕವು ಇಸ್ಲಾಮಿನ ಬಗ್ಗೆ ಮುಸ್ಲಿಮೇತರ ಬಂಧುಗಳಲ್ಲಿ ಹರಡಿಕೊಂಡಿರುವ ತಪ್ಪು ತಿಳುವಳಿಕೆಗಳನ್ನು ನೀಗಿಸಲು ಸಹಕಾರಿ ಯಾದೀತೆಂದು ನಿರೀಕ್ಷಿಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಅತ್ಯುತ್ತಮ ಮಾದರಿ

"ಇಸ್ಲಾಮ್ ಧರ್ಮವನ್ನು ನಾನು ಬಹಳ ಗೌರವಾದರಗಳೊಂದಿಗೆ ವೀಕ್ಷಿಸುತ್ತೇನೆ. ಈ ವಿಷಯದಲ್ಲಿ ನನ್ನ ವಿಚಾರಗಳನ್ನು ಬರೆಯುತ್ತಿರುವೆನು. ವಾಚಕರು ಗಮನವಿಟ್ಟು ಓದುವರೆಂದು ಹಾರೈಸುತ್ತೇನೆ.

ಸಾಮಾನ್ಯವಾಗಿ ಇಂದು ಧರ್ಮಗಳ ಸ್ಥಾಪಕರನ್ನು ಪ್ರತಿಗಾಮಿಗಳೆನ್ನಲಾಗುತ್ತದೆ. ಆದರೆ ಅವರೆಲ್ಲರೂ ತಂತಮ್ಮ ಕಾಲದ ಅಜ್ಞಾನಜನ್ಯ ಸಂಪ್ರದಾಯಗಳ ವಿರುದ್ಧ ಹೋರಾಡಿದ ಕ್ರಾಂತಿಕಾರಿ ನಾಯಕರಾಗಿದ್ದರೆಂಬುದೇ ನನ್ನ ಅನ್ವೇಷಣೆ.

ಹಿಂದೂ ಧರ್ಮ ಅಥವಾ ವೈದಿಕ ಧರ್ಮದ ಸುಧಾರಣೆಯ ಪ್ರಯತ್ನ ಮಾಡಿದ ಶಂಕರಾಚಾರ್ಯರು ಕ್ರಾಂತಿಕಾರಿಯಾಗಿದ್ದರು. ವೇದವೆಂಬ ಪದದ ಒಂದರ್ಥ 'ಬಚ್ಚಿಡು' ಅಥವಾ 'ಕಣ್ಣಿಗೆ ಬೀಳದಂತೆ ಇಡು' ಎಂದಾಗಿದೆ. ಇಂತಹ ವಿಚಾರಗಳನ್ನು ಹೊಂದಿದ ಸಮಾಜದಲ್ಲಿ "ವೇದ ಎಲ್ಲರಿಗೂ ಆಗಿದೆ" ಎಂದು ಘೋಷಿಸಿದ ರಾಮಾನುಜಾಚಾರ್ಯರ ವ್ಯಕ್ತಿತ್ವವೂ ಕ್ರಾಂತಿಕಾರಿಯಾಗಿತ್ತು.

ಹ. ಮಸೀಹ್(ಏಸುಕ್ರಿಸ್ತ) ಕೂಡಾ ತಮ್ಮ ಕಾಲದ ಅಜ್ಞಾನಜನ್ಯ ಆಚಾರ-ಸಂಪ್ರದಾಯಗಳ ವಿರುದ್ಧ ಹೋರಾಡಿದ ಓರ್ವ ಕ್ರಾಂತಿಕಾರಿ ವ್ಯಕ್ತಿಯಾಗಿದ್ದರು. ಈ ರೀತಿ ಧರ್ಮಗಳ ಇತಿಹಾಸವನ್ನು ನಾವು ಅವಲೋಕಿಸಿದರೆ ಅವುಗಳ ಪ್ರಮುಖ ವ್ಯಕ್ತಿಗಳು ಪ್ರತಿಗಾಮಿಗಳಾಗಿರಲಿಲ್ಲ. ಬದಲಾಗಿ ಕ್ರಾಂತಿಕಾರಿಗಳಾಗಿದ್ದರೆಂಬುದು ವ್ಯಕ್ತವಾಗುತ್ತದೆ.

ಈ ಕ್ರಾಂತಿಕಾರಿ ವ್ಯಕ್ತಿಗಳ ಪೈಕಿ ಅತ್ಯಧಿಕ ಮಹಾನತೆ ಹೊಂದಿದವರು ಪ್ರವಾದಿ ಮುಹಮ್ಮದ್(ಸ) ಆಗಿದ್ದರೆಂದು ಸ್ಪಷ್ಟವಾಗಿ ಸಾರಲು ನಾನು ಸಂಕೋಚ ಪಡುವುದಿಲ್ಲ. ಪ್ರವಾದಿ ಮುಹಮ್ಮದ್‌ರ(ಸ) ಹೊರತು ಇತರ ವ್ಯಕ್ತಿಗಳು(ಪ್ರವಾದಿಗಳ ಹೊರತು-ಅನು) ಜ್ಞಾನ ಮತ್ತು ವಿವೇಕವನ್ನು ಇತರರ ಸಹವಾಸದಲ್ಲಿ ಗಳಿಸಿದರು. ಅವರ ಕುಟುಂಬ ಮತ್ತು ತಂದೆ ತಾಯಿ ಅವರ ತರಬೇತಿಯ ಒಂದು ಮಾಧ್ಯಮವಾಗಿದ್ದರು. ಆದರೆ ಪ್ರವಾದಿ ಮುಹಮ್ಮದ್‌ರ(ಸ) ಪರಿಸ್ಥಿತಿಯು ಇದಕ್ಕೆ ತೀರಾ ಭಿನ್ನವಾಗಿತ್ತು. ಪ್ರವಾದಿ ಮುಹಮ್ಮದ್‌ರ(ಸ) ಜನನಕ್ಕೆ ಮುಂಚೆಯೇ ಅವರ ತಂದೆ ಅಬ್ದುಲ್ಲಾ ತೀರಿಕೊಂಡಿದ್ದರು. ತಂದೆಯ ಮುಖ ನೋಡದವರು ಮಾತ್ರ ಪ್ರವಾದಿವರ್ಯರ(ಸ) ವ್ಯಥೆಯನ್ನೂ ಸಂಕಷ್ಟವನ್ನೂ ಸರಿಯಾಗಿ ಊಹಿಸಬಹುದಾಗಿದೆ.

ಈ ವ್ಯಥೆಯೇ ಮುಗಿದಿರಲಿಲ್ಲ. ಪ್ರವಾದಿವರ್ಯರು(ಸ) ಕೇವಲ 6 ವರ್ಷ ಪ್ರಾಯದವರಾಗಿದ್ದಾಗ ತಾಯಿಯ ಆಸರೆಯೂ ಇಲ್ಲದಾಯಿತು. ಪ್ರವಾದಿವರ್ಯರು ತಮ್ಮ ತಾಯಿ ಮತ್ತು ಉಮ್ಮು ಐಮನ್‌ರೊಂದಿಗೆ ತಂದೆಯ ಗೋರಿಯಿದ್ದ ಯಸ್ರಿಬ್‌ಗೆ ಹೊರಟಿದ್ದರು. ದಾರಿಯಲ್ಲೇ ತಾಯಿಯ ನಿಧನವಾಯಿತು.

ತಂದೆಯ ಮುಖ ನೋಡಲಿಲ್ಲ. ಬಾಲ್ಯದಲ್ಲಿ ಪ್ರಯಾಣ ವೇಳೆಯಲ್ಲೇ ತಾಯಿಯ ಅಗಲಿಕೆಯ ನೋವನ್ನೂ ಅನುಭವಿಸಬೇಕಾಯಿತು. ಈ ಅನಾಥ ಮಗುವಿನ ಸಂರಕ್ಷಣೆಗೆ ತಾತ ಅಬ್ದುಲ್ ಮುತ್ತಲಿಬ್ ಮುಂದೆ ಬಂದರು. ಆದರೆ ಎರಡು ವರ್ಷಗಳೂ ಕಳೆಯಲಿಲ್ಲ. ಅವರೂ ತೀರಿಕೊಂಡರು.

ತಂದೆ, ತಾಯಿ, ತಾತ ಎಲ್ಲರ ಅನುಕಂಪವೂ ಇಲ್ಲದಾಯಿತು. ಈ ಎಲ್ಲ ಕಹಿ ಅನುಭವಗಳೂ ಕೇವಲ ಎಂಟೇ ವರ್ಷ ಪ್ರಾಯದೊಳಗೆ. ಈಗ ಪ್ರವಾದಿವರ್ಯರು ಏಕಾಂತವಾಗಿ ಬಿಟ್ಟಿದ್ದರು.

ಮಾನವ ಜಗತ್ತನ್ನು ದೇವ ಕಾರುಣ್ಯದೆಡೆಗೆ ಒಯ್ದ ಗೌರವಾನ್ವಿತ ವ್ಯಕ್ತಿತ್ವವು ಯಾರ ಆಶ್ರಯವೂ ಇಲ್ಲದೆ ಒಬ್ಬಂಟಿಗರಾಗಿ ನಿಂತಿರುವುದು ಕಂಡು ಬರುತ್ತದೆ.

ಈ ಘಟ್ಟದಲ್ಲಿ ಪ್ರವಾದಿಯ(ಸ) ಚಿಕ್ಕಪ್ಪ ಅಬೂ ತಾಲಿಬ್ ನೆರವಾಗುತ್ತಾರೆ. ತಂದೆ ತಾಯಿಗಳನ್ನು ಕಳಕೊಂಡವರು ಮಾತ್ರ ಅನಾಥರ ಸಂಕಷ್ಟಗಳನ್ನು ಸರಿಯಾಗಿ ಗ್ರಹಿಸಬಲ್ಲರು.

ಈ ರೀತಿ ಸಂಕಷ್ಟದಲ್ಲಿ ಸಿಲುಕಿದ ಓರ್ವ ಅನಾಥನ ಮೂಲಕ ಇಸ್ಲಾಮಿನಂತಹ ಮಹಾ ಅನುಗ್ರಹ ಜಗತ್ತಿಗೆ ದೊರೆಯಿತು. ಯಾವ ರೀತಿ ಈ ಅನಾಥನ ಪ್ರಚಾರ ಕಾರ್ಯವು ಸ್ಪೈಯಿನ್‌ನಿಂದ ಚೀನಾದ ವರೆಗೆ ಲೋಕದ ಒಂದು ಮೂಲೆಯಿಂದ ಮತ್ತೊಂದು ಮೂಲೆಯ ತನಕ ವ್ಯಾಪಿಸಿತೆಂಬುದು ಅತ್ಯಂತ ಆಶ್ಚರ್ಯಕರ ಸಂಗತಿ. ಪ್ರವಾದಿವರ್ಯರ(ಸ) ನಿಷ್ಕಳಂಕ ಹಾಗೂ ಪವಿತ್ರ ಜೀವನವೇ ಈ ಬೃಹತ್ ಪ್ರಚಾರದ ಮುಖ್ಯ ಕಾರಣ. ಪ್ರವಾದಿ ಮುಹಮ್ಮದ್‌ರ(ಸ) ವ್ಯಕ್ತಿತ್ವವು ಅಖಿಲ ಮಾನವಕುಲಕ್ಕೇ ಅತ್ಯುತ್ತಮ ಮಾದರಿಯಾಗಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು.

# ಜಾನುವಾರು ಮೇಯಿಸುವ ಅರಸ

ಪ್ರವಾದಿವರ್ಯರ ಜೀವನವು ಬಾಲ್ಯದಿಂದ ಕೊನೆ ತನಕ ಒಂದು ಅತ್ಯುತ್ತಮ ಮಾದರಿಯಾಗಿದೆ.

ಎಷ್ಟೋ ನಾಯಕರು ಮತ್ತು ಧರ್ಮದರ್ಶಿಗಳ ಪ್ರಾರಂಭಿಕ ಜೀವನವು ದುರ್ಮಾರ್ಗದಲ್ಲಿ ಸಾಗಿರುವುದು ಗೋಚರವಾಗುತ್ತದೆ. ಆದರೆ ಪ್ರಬುದ್ಧರಾದ ಬಳಿಕ ಸಾಯುವ ತನಕವೂ ಪ್ರವಾದಿವರ್ಯರ ಜೀವನವು ಪವಿತ್ರವಾಗಿರುವುದನ್ನು ನಾವು ಕಾಣುತ್ತೇವೆ. ಅದರಲ್ಲಿ ಯಾವುದೇ ರೀತಿಯ ಕೊಳೆ ಅಥವಾ ಕಲ್ಮಶ ನಮಗೆ ಕಾಣ ಸಿಗುವುದಿಲ್ಲ.

ಪ್ರವಾದಿವರ್ಯರು ತಮ್ಮ ಚಿಕ್ಕಪ್ಪ ಅಬೂ ತಾಲಿಬ್‌ರ ಆಶ್ರಯದಲ್ಲಿದ್ದರು. ಅವರ ಆರ್ಥಿಕ ಸ್ಥಿತಿಯು ಅಷ್ಟು ಉತ್ತಮವಾಗಿರಲಿಲ್ಲ. ಆದುದರಿಂದ ಅವರ ಆರ್ಥಿಕ ಭಾರವನ್ನು ಕಡಿಮೆಗೊಳಿಸಲಿಕ್ಕಾಗಿ ಪ್ರವಾದಿವರ್ಯರು ಕೂಲಿಗೆ ಜಾನುವಾರುಗಳನ್ನು ಮೇಯಿಸುವ ಕೆಲಸವನ್ನು ಮಾಡಿದರು.

❖ ನನ್ನ ನೇತಾರ.

❖ ಸಕಲ ವಿಶ್ವಕ್ಕೆ ಸನ್ಮಾರ್ಗದರ್ಶನ ಮಾಡಲು ದೇವನಿಂದ ನಿಯುಕ್ತನಾದ ನಾಯಕ.

❖ ರೋಮ್‌ನ ಬೃಹತ್ ಶಕ್ತಿಯನ್ನು ಸೋಲಿಸಿದ ಮುಖಂಡ.

❖ ಯುಕ್ತಿ, ಕರ್ಮ ಮತ್ತು ಲೋಕದ ಎಲ್ಲ ಖಜಾನೆಗಳನ್ನು ಇಸ್ಲಾಮಿನ ಪಾದ ಗಳಿಗೆ ಧಾರೆ ಎರೆದ ಮಹಾನಾಯಕ.

❖ ರಾಜಾಧಿರಾಜ!

ಬಾಲ್ಯದಲ್ಲಿ ಕೂಲಿಗೆ ಜಾನುವಾರು ಮೇಯಿಸಿದರು.

ಎಷ್ಟೋ ಕಷ್ಟಕಾರ್ಪಣ್ಯಗಳಿಗೆ ಬಲಿಯಾದರು. ಈ ಬಗ್ಗೆ ಯೋಚಿಸಿದಾಗಲೇ ನಮ್ಮ ಕಣ್ಣಲ್ಲಿ ಹನಿಗೂಡುತ್ತದೆ.

"ಮುಸ್ಲಿಮರಿಗೆ ಇಂತಹ ಮಹಾನ್ ಚಾರಿತ್ರ್ಯವನ್ನು ಹೊಂದಿದ ವ್ಯಕ್ತಿಯ ನಾಯಕತ್ವವಿದೆ. ಖಂಡಿತ ಮುಸ್ಲಿಮರು ಅಸೂಯೆ ಪಡಬೇಕಾದಷ್ಟು ಅದೃಷ್ಟಶಾಲಿಗಳು."

ಪ್ರವಾದಿವರ್ಯರು ಆಡುಗಳನ್ನು ಮೇಯಿಸಿದರು. 12 ವರ್ಷದ ಎಳೆ ಪಯಸ್ಸಿನಲ್ಲಿ ತಮ್ಮ ಚಿಕ್ಕಪ್ಪನ ಜೊತೆ ವ್ಯಾಪಾರಕ್ಕಾಗಿ ಊರು ಬಿಟ್ಟು ಪರಊರಿಗೆ ಪಯಣಿಸಿದರು.

ತಮ್ಮ ಗೋತ್ರದವರ ಸರಕಿನೊಂದಿಗೆ ಅಬಲೆಯರೂ ನಿರ್ಗತಿಕರೂ ಆದ ಮಹಿಳೆಯರ ಸರಕನ್ನೂ ಒಯ್ದರು. ಅವರಿಗೂ ಒಂದಿಷ್ಟು ಲಾಭ ಸಿಗಲಿ ಎಂಬ ಉದ್ದೇಶದಿಂದ. ನಿರ್ಗತಿಕರ ಮತ್ತು ಬಲಹೀನರ ಬಗ್ಗೆ ಸದಾ ಕಾಳಜಿ ವಹಿಸುತ್ತಿದ್ದರು. "ನಾನು ಪೇಟೆಗೆ ಹೋಗುತ್ತಿದ್ದೇನೆ, ನಿಮಗೆ ಏನಾದರೂ ತರಬೇಕೇ?"

ಈ ವಿನಂತಿಯನ್ನು ತಮ್ಮ ನೆರೆಕರೆಯವರಲ್ಲಿ ಪ್ರವಾದಿವರ್ಯರೇ ಮಾಡುತ್ತಿದ್ದರು. ಅವರು ಹೇಳಿದ ವಸ್ತುಗಳನ್ನು ತಂದೂ ಕೊಡುತ್ತಿದ್ದರು.

ಇದೇ ರೀತಿ ನಿರ್ಗತಿಕರ ಮತ್ತು ಮರ್ದಿತರ ನೆರವಿಗಾಗಿ 'ಹಲ್ಫುಲ್ ಫುಝೂಲ್' ಎಂಬ ಸಂಘ ಸ್ಥಾಪನೆಯಾದಾಗ ಅದರಲ್ಲಿಯೂ ಭಾಗವಹಿಸಿ ಸಂಪೂರ್ಣ ಸಹಕಾರ ನೀಡಿದರು.

ಪ್ರವಾದಿವರ್ಯರ ಜೀವನವು ಸತ್ಯಸಂಧತೆಯ ಮಾದರಿಯಾಗಿತ್ತು. ಅವರೆಂದೂ ವಚನಭಂಗ ಮಾಡಿರಲಿಲ್ಲ.

ಒಮ್ಮೆ ಓರ್ವ ವ್ಯಕ್ತಿ ಪ್ರವಾದಿವರ್ಯರಿಗೆ 'ಇಲ್ಲೇ ನಿಲ್ಲಿ, ನಾನೀಗ ಬರುತ್ತೇನೆ' ಎಂದು ಹೇಳಿ ಹೋದರು.

ಪ್ರವಾದಿವರ್ಯರು ಅದೇ ಸ್ಥಳದಲ್ಲಿ ಒಂದಲ್ಲ, ಎರಡಲ್ಲ, ಮೂರು ದಿನ ನಿಂತರು.

ನಿಲ್ಲಿಸಿ ಹೋದ ವ್ಯಕ್ತಿಗೆ ಇದು ಮರೆತು ಹೋಗಿತ್ತು. ಮೂರನೇ ದಿನ ಆಕಸ್ಮಿಕವಾಗಿ ಆ ದಾರಿಯಾಗಿ ಹೋದಾಗ ಪ್ರವಾದಿವರ್ಯರನ್ನು ಕಂಡು ಖೇದ ವ್ಯಕ್ತಪಡಿಸುತ್ತಾ 'ತಾವು ಇಲ್ಲೇ ನಿಂತಿರುವಿರಾ?' ಎಂದು ಕೇಳಿದರು. ಅದಕ್ಕೆ ಸ್ವಲ್ಪವೂ ಕೋಪಗೊಳ್ಳದೆ ಸೌಮ್ಯವಾಗಿ 'ತಾವಲ್ಲವೇ ನನ್ನನ್ನಿಲ್ಲಿ ನಿಲ್ಲಿಸಿ ಹೋದದ್ದು' ಎಂದರು.

ಇಂತಹ ಉದಾತ್ತ ಗುಣಗಳಿಂದಾಗಿ ಜನರು ಅವರನ್ನು 'ಅಮೀನ್'(ಅತ್ಯಂತ ಪ್ರಾಮಾಣಿಕ) ಹಾಗೂ 'ಸಾದಿಕ್'(ಅತ್ಯಂತ ಸತ್ಯವಂತ) ಎಂದು ಕರೆಯುತ್ತಿದ್ದರು.

ಇಂತಹ ಶ್ರೇಷ್ಠ ಗುಣಗಳ ವ್ಯಕ್ತಿಯನ್ನು ಖದೀಜಾ(ರ) ತಮ್ಮ ಜೀವನ ಸಂಗಾತಿಯಾಗಿ ಆರಿಸಿಕೊಂಡರು. ಇದು ವಾಸ್ತವದಲ್ಲಿ ಖದೀಜಾರ(ರ) ಸುದೈವವಾಗಿತ್ತು.

ಅವರು ಈ ಮೊದಲು ಎರಡು ಸಲ ವಿಧವೆಯ ದುಃಖ ಅನುಭವಿಸಿದ್ದರು. ಖದೀಜಾ(ರ) ಪ್ರಾಯದಲ್ಲಿ ಪ್ರವಾದಿವರ್ಯರಿಗಿಂತ 15 ವರ್ಷ ಹಿರಿಯರಾಗಿದ್ದರು. ತಾಹಿರಾ(ಪವಿತ್ರೆ) ಎಂಬುದು ಅವರ ಬಿರುದಾಗಿತ್ತು.

ಹ. ಖದೀಜಾರಿಂದ(ರ) ಪ್ರವಾದಿವರ್ಯರು ಕಾಸಿಮ್, ಅಬ್ದುಲ್ಲಾ, ಝೈನಬ್, ರುಕಿಯ್ಯ, ಉಮ್ಮು ಕುಲ್ಸೂಮ್, ಫಾತಿಮಾ ಎಂಬ ಮಕ್ಕಳನ್ನು ಪಡೆದರು. ಕಾಸಿಮ್ ಮತ್ತು ಅಬ್ದುಲ್ಲಾ ಎಳೆ ವಯಸ್ಸಿನಲ್ಲೇ ತೀರಿಹೋದರು.

ಖದೀಜಾರೊಂದಿಗೆ(ರ) ಮದುವೆಯಾದ ಬಳಿಕ ಸ್ವಲ್ಪ ಆರ್ಥಿಕ ಸುಸ್ಥಿತಿ ಬಂದೊದಗಿದಾಗ ಕಾರುಣ್ಯದ ಪ್ರವಾದಿಯ ಗಮನವೆಲ್ಲಾ ಮಾನವಕುಲದ ಸುಧಾರಣೆಯತ್ತ ಕೇಂದ್ರೀಕೃತವಾಯಿತು.

ಕೌಟುಂಬಿಕ ಹೊಣೆಗಾರಿಕೆಗಳನ್ನು ನಿರ್ವಹಿಸುತ್ತಾ ಧರ್ಮದ ಕಡೆಗೆ ಆಹ್ವಾನಿಸುವ ಮತ್ತು ಧರ್ಮ ಸಂಸ್ಥಾಪನೆಯ ಕರ್ತವ್ಯಗಳನ್ನು ಪೂರೈಸುವ ಮಾದರಿಯು ನಮಗೆ ಈ ಮಹಾನ್ ಪ್ರವಾದಿಯ ಜೀವನದಿಂದಲೇ ಲಭಿಸುತ್ತದೆ.

❖ ಗೌತಮ ಬುದ್ಧರು ಸನ್ಯಾಸ ಸ್ವೀಕರಿಸಿದ್ದರು.

❖ ಶಂಕರಾಚಾರ್ಯರು ಮದುವೆಯಾಗಲಿಲ್ಲ.

❖ ಹ. ಮಸೀಹ್(ಏಸುಕ್ರಿಸ್ತ) ಅವಿವಾಹಿತರಾಗಿದ್ದರು.

ಅನೇಕ ಧಾರ್ಮಿಕ ನಾಯಕರು ಬ್ರಹ್ಮಚಾರಿ, ಅವಿವಾಹಿತ ಮತ್ತು ಸನ್ಯಾಸಿಗಳಾಗಿಯೇ ಕಾಣುತ್ತಾರೆ.

ಆದರೆ ಪ್ರವಾದಿವರ್ಯರು ತಮ್ಮ ಗೃಹಸ್ಥ ಜೀವನದ ಹೊಣೆಗಾರಿಕೆಗಳನ್ನು ನೆರವೇರಿಸುತ್ತಲೂ ಧರ್ಮ ಸಂಸ್ಥಾಪನೆಯ ಎಲ್ಲ ಹೊಣೆಯನ್ನೂ ಹೆಗಲ ಮೇಲೆ ಹೊತ್ತಿರುವುದಾಗಿ ಕಾಣುತ್ತಾರೆ.

ಕೇವಲ ಒಬ್ಬಳೇ ಪತ್ನಿಯಲ್ಲ. ಅನೇಕ ಪತ್ನಿಯರ ಹೊಣೆ ಅವರ ಮೇಲಿದೆ. ಈ ಎಲ್ಲ ಹೊಣೆಯ ಹೊರತಾಗಿಯೂ ಅವರ ಕುಟುಂಬ ಜೀವನವು ಆದರ್ಶಪ್ರಾಯವಾಗಿತ್ತು ಮತ್ತು ಸಾಮಾಜಿಕ ಜೀವನವೂ ಉದಾತ್ತ ಮಾದರಿಯಾಗಿತ್ತು.

ಜನರು ಅವರನ್ನು 'ಅಮೀನ್' ಮತ್ತು 'ಸಾದಿಕ್' ಎಂದು ಕರೆದರು. ಆದರೆ ಅದೇ ವ್ಯಕ್ತಿ ಧರ್ಮದ ಕಡೆಗೆ ಕರೆ ನೀಡಿದಾಗ ಆ ಜನರು ಅವರ ಕಠಿಣ ಶತ್ರುಗಳಾದರು.

ಧರ್ಮಗಳ ಇತಿಹಾಸದಲ್ಲಿ ಅನೇಕ ಕ್ರಾಂತಿಕಾರಿಗಳು ತಮ್ಮ ಸಂದೇಶವನ್ನು ಬಿತ್ತರಿಸಿದ್ದರು. ಆದರೆ ಪ್ರವಾದಿವರ್ಯರಷ್ಟು ಕಠಿಣ ವಿರೋಧ ಯಾರಿಗೂ ಎದುರಾಗಲಿಲ್ಲ. ಇಷ್ಟು ತೀವ್ರ ವಿರೋಧವೇಳಲು ಅವರ ಪ್ರಚಾರದಲ್ಲೇನಿತ್ತು?

# ನಿರಾಕಾರದ ಆರಾಧನೆ

ಲೋಕದ ಯಾವ ಕ್ರಾಂತಿಕಾರಿಯೂ ಪ್ರವಾದಿವರ್ಯರು(ಸ) ಹೇಳಿದ ಮಾತನ್ನು ಹೇಳಲಿಲ್ಲ. ವಿಗ್ರಹ, ಪ್ರತಿಮೆ, ಚಿತ್ರ ಯಾವ ವಸ್ತುವೂ ಇರಬಾರದು.* ಈ ಶಿಕ್ಷಣವನ್ನು ಪ್ರವಾದಿವರ್ಯರು(ಸ) 14 ಶತಮಾನಗಳ ಹಿಂದೆ ನೀಡಿದರು. ವಿಗ್ರಹಗಳೂ ಚಿತ್ರಗಳೂ ಇರಬಾರದೆಂದು ಹೇಳುವುದು ಸುಲಭ. ಆದರೆ ಪ್ರವಾದಿವರ್ಯರು(ಸ) ಇನ್ನೊಂದು ಹೆಜ್ಜೆ ಮುಂದಿಟ್ಟು ವಿಗ್ರಹಗಳನ್ನು ನೀಗಿಸಿದರು. ಚಿತ್ರಗಳನ್ನು ಅಳಿಸಿದರು. ಅವರು ಶಿಕ್ಷಣ ನೀಡಿದ್ದು ಮಾತ್ರವಲ್ಲ, ಮಾಡಿಯೂ ತೋರಿಸಿದರು.

ತಮಿಳ್ನಾಡಿನಲ್ಲಿ ನಾವು ಇ.ವಿ.ಆರ್.(ರಾಮಸ್ವಾಮಿ ಅಯ್ಯರ್)ರನ್ನು ಮಹಾನ್ ಕ್ರಾಂತಿಕಾರಿ ವ್ಯಕ್ತಿಯೆಂದು ಪರಿಗಣಿಸುತ್ತೇವೆ. ಏಕೆಂದರೆ ಅವರು ವಿಗ್ರಹಾರಾಧನೆಯನ್ನು ವಿರೋಧಿಸಿದ್ದು ಮಾತ್ರವಲ್ಲ ವಿಗ್ರಹಗಳನ್ನು ಒಡೆದೂ ತೋರಿಸಿದರು. ಆದರೆ ಪ್ರವಾದಿ ವರ್ಯರು(ಸ) ಅನೇಕ ಶತಮಾನಗಳ ಹಿಂದೆಯೇ ಇದನ್ನು ಮಾಡಿ ತೋರಿಸಿದ್ದರು. 'ಸತ್ಯ ಬಂತು, ಮಿಥ್ಯ ತೊಲಗಿತು; ಮಿಥ್ಯ ತೊಲಗಲೇಬೇಕು' ಎಂಬ ಕುರ್‌ಆನ್ ವಾಕ್ಯವನ್ನು ಪಠಿಸುತ್ತಾ ಪ್ರವಾದಿವರ್ಯರು(ಸ) ಕಅಬಾ ಭವನದಲ್ಲಿದ್ದ ವಿಗ್ರಹಗಳನ್ನು ನೀಗಿಸಿದ್ದರು.

ಮುಸ್ಲಿಮರ ಅತಿದೊಡ್ಡ ಹಬ್ಬ 'ಈದುಲ್ ಅಝ್‌ಹಾ'(ಬಕ್ರೀದ್). ಈ ಹಬ್ಬ ಯಾರ ಸ್ಮರಣಾರ್ಥ ಆಚರಿಸಲಾಗುತ್ತದೆ? ಅವರೇನು ಮಾಡಿದ್ದರು?

ಹ.ಇಬ್ರಾಹೀಮ್(ಅ) ತಮ್ಮ ಪ್ರೀತಿಯ ಸುಪುತ್ರ ಇಸ್ಮಾಈಲ್‌ರನ್ನು(ಅ) ದೇವಮಾರ್ಗದಲ್ಲಿ ಬಲಿ ನೀಡಲು ಮುಂದಾದರು. ಅದರ ಸ್ಮರಣಾರ್ಥವಾಗಿಯೇ ಈ ಹಬ್ಬವನ್ನು ಆಚರಿಸಲಾಗುತ್ತಿದೆ.

ಈ ಮಹಾತ್ಮರುಗಳ ಚಿತ್ರ ಕೂಡಾ ಕಅಬಾದಲ್ಲಿ ಇರಿಸಲಾಗಿತ್ತು.

ಹಬ್ಬ ಆಚರಣೆಗೆ ಪ್ರವಾದಿ ಮುಹಮ್ಮದ್‌ರೇ(ಸ) ಆಜ್ಞಾಪಿಸಿದ್ದರು. ತನ್ಮೂಲಕ ಆ ಮಹಾನ್ ವ್ಯಕ್ತಿಗಳ ಗೌರವಾದರಗಳನ್ನು ಪ್ರಳಯಕಾಲದ ತನಕ ಶಾಶ್ವತಗೊಳಿಸಿದರು. ಆದರೆ ವಿಗ್ರಹಗಳೊಂದಿಗೆ ಅವರ ಚಿತ್ರಗಳನ್ನೂ ಕಅಬಾ ಭವನದಿಂದ ನೀಗಿಸಿದರು. ಇದಕ್ಕಿಂತ ಹಿರಿದಾದ ಕ್ರಾಂತಿಕಾರಿ ಹೆಜ್ಜೆಯ ಬಗ್ಗೆ ಊಹಿಸಬಹುದೇ?

---

*ಏಕೆಂದರೆ ಅವು ದೇವರಲ್ಲ, ಪೂಜಾರ್ಹವೂ ಅಲ್ಲ. ಪೂಜಾರ್ಹನು ಕೇವಲ ಸೃಷ್ಟಿಕರ್ತನಾದ ಅಲ್ಲಾಹನು ಮಾತ್ರ.

ಈ ಕ್ರಮ ಕೈಗೊಂಡ ದೇಶ ಯಾವುದು ಗೊತ್ತೇ? ಜನತೆಯ ನರನಾಡಿಗಳಲ್ಲಿಯೂ ಅಜ್ಞಾನ ಮತ್ತು ವಿಗ್ರಹಾರಾಧನೆ ಮನೆ ಮಾಡಿರುವಂಥ ದೇಶದಲ್ಲಿ.

ರಶ್ಯಾದಲ್ಲಿ ಕಮ್ಯೂನಿಸ್ಟ್ ಸರಕಾರವಿದೆ. ಅವರು ದೇವನ ಅಸ್ತಿತ್ವವನ್ನೇ ನಿರಾಕರಿಸುತ್ತಾರೆ. ಆದರೆ ಅಲ್ಲಿ ದೇವ, ದೇವತೆಗಳ ವಿಗ್ರಹಗಳನ್ನು ನೀಗಿಸುವ ಅಥವಾ ಅಳಿಸುವ ಧೈರ್ಯ ಯಾರಿಗೂ ಇಲ್ಲ.

ತಮಿಳ್ನಾಡಿನಲ್ಲಿ ಕೆಲವು ಕ್ರಾಂತಿಕಾರಿ ಕವಿಗಳು ಇಲ್ಲಿನ ವಿಗ್ರಹಗಳನ್ನು ಅಳಿಸಿ ಹಾಕುವ ಮುಂಜಾನೆ ಯಾವಾಗ ಉದಯವಾದೀತೆಂಬ ಪದ್ಯ ಹಾಡಿದರು. ಆದರೆ ಇಲ್ಲಿನ ಬೀದಿ ಬೀದಿಯಲ್ಲಿ, ಕೇರಿ ಕೇರಿಯಲ್ಲಿ ಇಂದಿಗೂ ಆ ವಿಗ್ರಹಗಳಿವೆ.

ಆದರೆ 14 ಶತಮಾನಗಳ ಹಿಂದೆ ಅಜ್ಞಾನದ ವಿಗ್ರಹಗಳನ್ನು ಕಲಬಾದಿಂದ ನೀಗಿಸಲಾಯಿತು. ಇದು ಮಾನವ ಇತಿಹಾಸದಲ್ಲೇ ಅತ್ಯಂತ ಧೈರ್ಯಶಾಲಿ ಕ್ರಮವಾಗಿತ್ತು.

ತಮ್ಮದೇ ದೇಶದಲ್ಲಿ ತಮ್ಮ ಪೂರ್ವಜರೇ ಪೂಜಿಸುತ್ತಿದ್ದ ವಿಗ್ರಹಗಳನ್ನು ನೀಗಿಸುವುದು ಮತ್ತು ಅಳಿಸುವುದು ಅಸಾಮಾನ್ಯ ಸಾಹಸದ ಕಾರ್ಯವಾಗಿದೆ. ಇಂತಹ ಕ್ರಾಂತಿಕಾರಿ ಕ್ರಮವು ಮಾನವ ಇತಿಹಾಸದಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ಕೈಗಳಿಂದಲೇ ಸಾಧ್ಯವಾಯಿತು.

ಇಂದಿನ ಮಾನವರು ತಮ್ಮ ಪ್ರಗತಿಯ ಬಗ್ಗೆ ಬಹಳ ಜಂಭ ಕೊಚ್ಚಿಕೊಳ್ಳುತ್ತಾರೆ. ದೇವ ಧಿಕ್ಕಾರವನ್ನೂ ನಾಸ್ತಿಕತೆಯನ್ನೂ ತಮ್ಮ ಪುರೋಗಮನದ ಪುರಾವೆಯ ರೂಪದಲ್ಲಿ ಅವರು ಮುಂದಿಡುತ್ತಾರೆ. ಆದರೆ ಅವರು ತಮ್ಮ ಚಿತ್ರ ಹಾಗೂ ವಿಗ್ರಹಗಳ ಪ್ರೇಮಪಾಶದಲ್ಲಿ ಸಿಲುಕಿದ್ದಾರೆ.

ದೇವನನ್ನೇ ನಿರಾಕರಿಸುವ ಹಾಗೂ ದೇವತೆಗಳ ವಿಗ್ರಹಗಳೂ ನಿರರ್ಥಕವೆಂದು ಸಾರುವ ಈ ಪುರೋಗಾಮಿಗಳು ತಮ್ಮ ನೇತಾರರ ವಿಗ್ರಹಗಳನ್ನು ಸಿದ್ಧಪಡಿಸುವುದು ಮತ್ತು ಅವುಗಳ ಮುಂದೆ ಶಿರಬಾಗುವುದು ಎಂಥ ವಿಪರ್ಯಾಸದ ಸಂಗತಿ!

ಅವರು ದೇವತೆಗಳ ವಿಗ್ರಹಗಳನ್ನು ನೀಗಿಸಿ ಆ ಸ್ಥಾನದಲ್ಲಿ ತಮ್ಮ ವಿಗ್ರಹಗಳನ್ನು ಪ್ರತಿಷ್ಠಾಪಿಸುತ್ತಾರೆ. ವಿಗ್ರಹಗಳೂ, ಚಿತ್ರಗಳೂ ಮಾನವ ದೌರ್ಬಲ್ಯದ ಪ್ರತೀಕವಾಗಿವೆ.

ಈ ದೌರ್ಬಲ್ಯದ ಬಗ್ಗೆ ಎಚ್ಚರಿಸಿದವರೂ ಅದರಿಂದ ಜನರನ್ನು ತಡೆದವರೂ ಪ್ರವಾದಿ ಮುಹಮ್ಮದ್(ಸ) ಆಗಿದ್ದರು. ಅವರು ಈ ಕಾರ್ಯವನ್ನು 14 ಶತಮಾನಗಳ ಹಿಂದೆಯೇ ನಿರ್ವಹಿಸಿದರು.

ಇಂದು ಚಿತ್ರಗಳ ಮತ್ತು ವಿಗ್ರಹಗಳ ಆಸರೆಯಿಲ್ಲದೆ ಕೇವಲ ಜ್ಞಾನ ಮತ್ತು ವಿಶ್ವಾಸದ ಬುನಾದಿಯಲ್ಲಿ ಯಾವುದಾದರೂ ಆಂದೋಲನ ನಡೆಯುವುದಿದ್ದರೆ ಅದು ಕೇವಲ ಇಸ್ಲಾಮಿ ಆಂದೋಲನವಾಗಿದೆ.

ಚಿತ್ರ ಮತ್ತು ವಿಗ್ರಹಗಳ ನಿರ್ಮಾಣ ಸ್ಥಗಿತಗೊಂಡರೆ ಮಾನವನ ಕಲಾ ಕೌಶಲ್ಯವು ನಾಶವಾದೀತೆಂದು ಕೆಲವರು ವಾದಿಸುತ್ತಾರೆ. ಆದರೆ ಇವುಗಳಿಂದ ಪೂರ್ಣ ಮುಕ್ತವಾದ ಮುಸ್ಲಿಮ್ ಸಮಾಜವು ಜಗತ್ತಿಗೆ ಅತ್ಯಂತ ಸುಂದರ ಕಟ್ಟಡಗಳನ್ನು ಕೊಡುಗೆ ನೀಡಿದೆ.

ತಮ್ಮ ವಿಚಾರಗಳನ್ನು ಚಿತ್ರ ಮತ್ತು ವಿಗ್ರಹಗಳ ಬಂಧನದಿಂದ ಮುಕ್ತಗೊಳಿಸಿದ ಬಳಿಕ ಮುಸ್ಲಿಮರು ಸಾಧಿಸಿದ ಮಹತ್ಕಾರ್ಯಗಳ ವಿವರ ಈ ರೀತಿ ಇದೆ.

1. ಗಣಿತ ಶಾಸ್ತ್ರದಲ್ಲಿ ಪ್ರಚಲಿತವಿರುವ ರೇಖಾ ಗಣಿತವನ್ನು ಬಳಕೆಗೆ ತಂದರು.

2. ಬೀಜಗಣಿತ ಅಸ್ತಿತ್ವಕ್ಕೆ ಬಂತು ಮತ್ತು ಅದರ ಪ್ರಗತಿಯಾಯಿತು.

3. ನಿರ್ಮಾಣ ಕಲೆಯಲ್ಲಿ ಸುಂದರ ಕಟ್ಟಡಗಳ ಮತ್ತು ಮಸೀದಿಗಳ ನಿರ್ಮಾಣವಾಯಿತು.

4. ರಸಾಯನ ಶಾಸ್ತ್ರದಲ್ಲಿ ಸಿಲ್ವರ್ ನೈಟ್ರೇಟ್ ಮತ್ತು ಸಲ್ಫ್ಯೂರಿಕ್ ಆ್ಯಸಿಡ್ ಕಂಡು ಹಿಡಿಯಲಾಯಿತು.

5. ವೈದ್ಯ ಶಾಸ್ತ್ರದಲ್ಲಿ- (ಅ) ಅಲ್ ಫಾರಾಬಿಯವರ ಗ್ರಂಥ "ಶಸ್ತ್ರ ಚಿಕಿತ್ಸೆಯ ವಿದ್ಯೆ". (ಆ) ಇಬ್ನುಸೀನಾರ ಗ್ರಂಥ "ಅಲ್ ಕಾನೂನ್" (ಇ) ಅಲೀ ಬಿನ್ ಅಬ್ಬಾಸಿಯವರ "ಕಿತಾಬುಲ್ ಮಾಲಿಕಿ" ಮುಂತಾದ-ಆಕರ ಗ್ರಂಥಗಳನ್ನು ಬರೆಯಲಾಯಿತು.

6. ಕಾವ್ಯದಲ್ಲಿ: ಮುತನಬ್ಬಿಯಿಂದ ಇಕ್ಬಾಲರ ತನಕ ಸುಂದರ ಮತ್ತು ಅಸದೃಶ ವಿಚಾರ ಸರಣಿಯ ಒಂದು ಸಮುದ್ರವೇ ಉಕ್ಕಿ ಹರಿಯುತ್ತಿದೆ.

7. ಸಾಹಿತ್ಯದಲ್ಲಿ: ಅಲಿಫ್‌ಲೈಲಾ, ಲೈಲಾ ಮಜ್ನೂನ್‌ನಂತಹ* ಅಪೂರ್ವ ನಿಧಿ ಮಾನವ ಜನಾಂಗಕ್ಕೆ ದೊರಕಿತು.

ಬೇರೆ ಜನಾಂಗಗಳು ಇಂತಹ ಹೆಮ್ಮೆ ಪಡಬಹುದಾದಂತಹ ಕಾರ್ಯಗಳನ್ನು ಮಾಡಿಲ್ಲವೇ ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವಾಗಿ "ಇಷ್ಟು ಅಧಿಕ ಸಂಖ್ಯೆಯಲ್ಲಿಲ್ಲ" ಎಂದೇ ಹೇಳಬೇಕಾಗುತ್ತದೆ.

ಇನ್ನೊಂದು ವಿಶೇಷ ಗುಣವೇನೆಂದರೆ ಈ ಶಿಕ್ಷಣಗಳನ್ನು ಜಗತ್ತಿಗೆ ನೀಡಿದ ಜನಾಂಗವು ಹೊರಟದ್ದು ಉರಿಬಿಸಿಲಿನ ಮರಳುಗಾಡಿನಿಂದ. ಪ್ರಕೃತಿಯ ರಮಣೀಯ ದೃಶ್ಯಗಳು ಅಲ್ಲಿರಲಿಲ್ಲ. ಆದರೂ ಆ ಜನಾಂಗ ಕಲೆ ಮತ್ತು ಸೌಂದರ್ಯ ಪ್ರಿಯತೆಯ ಉತ್ತಮ ಅಭಿರುಚಿಯನ್ನು ಜಗತ್ತಿಗೆ ನೀಡಿತು.

ಕೇವಲ ಓರ್ವ ನಿರಕ್ಷರಿಯ ಶಿಕ್ಷಣವು ಇಷ್ಟೆಲ್ಲಾ ಸಾಧಿಸಿತು. ಮಾನವಕುಲವನ್ನು ಉನ್ನತಿಯ ಶಿಖರಕ್ಕೇರಿಸಿತು.

ನಾನು ಇಸ್ಲಾಮನ್ನು ಏಕೆ ಪ್ರೀತಿಸುತ್ತೇನೆ? ಇದರ ಇನ್ನೂ ಕೆಲವು ಕಾರಣಗಳನ್ನು ಮುಂದಿನ ಪುಟಗಳಲ್ಲಿ ನೋಡಿರಿ.

ೞ•ೞ

*ಅಲಿಫ್‌ಲೈಲಾ, ಲೈಲಾ ಮಜ್ನೂನ್ ಮುಂತಾದ ಕಥೆಗಳು ಇಸ್ಲಾಮೀ ಸಾಹಿತ್ಯಗಳಾಗಿರಲಿಲ್ಲ.-ಅನು.

# ನನ್ನ ಪ್ರೀತಿಯ ಧರ್ಮ

ಪವಾಡಗಳಿಲ್ಲದೆ ಅತಿ ದೊಡ್ಡ ಪವಾಡ ತೋರಿಸಿದ ಪ್ರವಾದಿ!

ಧಾರ್ಮಿಕ ನಾಯಕರ ಮೇಲೆ ಸಾಮಾನ್ಯ ಜನರು ಸುಲಭದಲ್ಲಿ ವಿಶ್ವಾಸ ತರುವುದಿಲ್ಲ. ಅನೇಕ ನಾಯಕರು ಅದ್ಭುತಗಳ ಮತ್ತು ಚಮತ್ಕಾರಗಳ ಪ್ರದರ್ಶನ ಮಾಡುತ್ತಾರೆ. ಅವರ ಅದ್ಭುತಗಳನ್ನು ನೋಡಿ ಸಾಮಾನ್ಯ ಮನುಷ್ಯರ ಚಮತ್ಕಾರ ಪ್ರಿಯ ಬುದ್ಧಿಯು ಅವರ ಮೇಲೆ ವಿಶ್ವಾಸ ತರುತ್ತದೆ.

ದೇವ ವಿಶ್ವಾಸವೂ ಅನೇಕ ಧರ್ಮಗಳಲ್ಲಿ ಇದೇ ರೀತಿಯ ಅದ್ಭುತ ಪ್ರಿಯತೆಯ ಆಧಾರದಲ್ಲಿ ನೆಲೆ ನಿಂತಿದೆ.

ವಾಸ್ತವದಲ್ಲಿ ಸತ್ಕರ್ಮಿಯಾದ ವ್ಯಕ್ತಿಗೆ ಅನಶ್ವರ ಸುಖ ಜೀವನವೂ ದುಷ್ಕರ್ಮಿಗಳಿಗೆ ಶಾಶ್ವತ ಸಂಕಷ್ಟವೂ ಇದೆಯೆಂದು ನಂಬುವ ವರೆಗೆ ಪುಣ್ಯಕಾರ್ಯ ಮತ್ತು ಪವಿತ್ರತೆಯ ಜೀವನ ಸಾಗಿಸುವ ಪಣ ತೊಟ್ಟು ಮುಂದುವರಿಯಲು ಮನುಷ್ಯನಿಗೆ ಸಾಧ್ಯವಿಲ್ಲ.

ಈ ಉದ್ದೇಶ ಪ್ರಾಪ್ತಿಗಾಗಿ ಮತ್ತು ಈ ವಿಷಯಗಳನ್ನು ಮನವರಿಕೆ ಮಾಡಿಕೊಡಲಿಕ್ಕಾಗಿ ಪುರಾಣಗಳಲ್ಲಿ, ವೇದಗಳಲ್ಲಿ, ಹಳೆಯ ಮತ್ತು ಹೊಸ ಒಡಂಬಡಿಕೆಗಳಲ್ಲಿ ಧರ್ಮದ ಕಡೆಗೆ ಆಹ್ವಾನಿಸಲು ವಿವಿಧ ಅಪ್ರಾಕೃತಿಕ ವಿಧಾನಗಳನ್ನು ಅನುಸರಿಸಿರುವುದು ಕಂಡುಬರುತ್ತದೆ.

ಇಂತಹ ಅದ್ಭುತಗಳನ್ನು ಬಿಟ್ಟು ಪವಿತ್ರ ಹಾಗೂ ಸಾತ್ವಿಕ ಜೀವನ ನಮಗೆಲ್ಲಿಯಾದರೂ ಕಾಣ ಸಿಗುವುದಿದ್ದರೆ ಅದು ಪ್ರವಾದಿವರ್ಯರ ಜೀವನದಲ್ಲಿ ಮಾತ್ರ.

ಇಷ್ಟು ಮಾತ್ರವಲ್ಲ, ಅವರಿಂದ ಪವಾಡಗಳನ್ನು ಅಪೇಕ್ಷಿಸಿದಾಗ ಅದಕ್ಕೆ ಉತ್ತರವಾಗಿ ಅವರು ಪವಿತ್ರ ಕುರ್‌ಆನನ್ನು ಮುಂದಿರಿಸಿದರು. ಪ್ರವಾದಿ ಮುಹಮ್ಮದ್‌ರದ್ದು ಬಾಹ್ಯ ಪವಾಡಗಳಿಂದ ನಿರಪೇಕ್ಷವಾಗಿ ಜ್ಞಾನ ಮತ್ತು ಯುಕ್ತಿಯ ಕಡೆಗೆ ಆಹ್ವಾನಿಸಿದ ಕ್ರಾಂತಿಕಾರಿ ವ್ಯಕ್ತಿತ್ವವಾಗಿತ್ತು.

ಇನ್ನೊಂದು ದೃಷ್ಟಿಕೋನದಿಂದ ಪ್ರವಾದಿವರ್ಯರ ಜೀವನವನ್ನು ವೀಕ್ಷಿಸಿರಿ. ಅವರು ಧಾರ್ಮಿಕ ನಾಯಕರೂ ಹೌದು, ಯುದ್ಧರಂಗದ ಸೇನಾನಿಯೂ ಹೌದು.

ಉಪದೇಶ ಮಾಡುವ ಉಪದೇಶಕರೂ ಹೌದು. ಓರ್ವ ವ್ಯವಸ್ಥಾಪಕ, ನಾಯಕ ಮತ್ತು ಮಾರ್ಗದರ್ಶಕರೂ ಹೌದು. ಈ ಎರಡೂ ನೆಲೆಗಳ ಅತಿ ಸುಂದರ ಸಮತೋಲನವನ್ನು ನಾವು ಅವರ ವ್ಯಕ್ತಿತ್ವದಲ್ಲಿ ದರ್ಶಿಸುತ್ತೇವೆ.

ಬದ್ರ್‌ನ ರಣಾಂಗಣವಾಗಿರಲಿ, ಬನೂ ಕೈನುಕಾದ ಮುತ್ತಿಗೆಯಿರಲಿ, ಸವೀಕ್ ಜಗಳವಾಗಿರಲಿ, ಉಹುದ್ ಯುದ್ಧವಾಗಿರಲಿ, ತಬೂಕ್ ಯುದ್ಧವಾಗಿರಲಿ, ಖೈಬರ್ ಯುದ್ಧವಾಗಿರಲಿ - ಪ್ರತಿಯೊಂದು ಕಡೆ ಪ್ರತಿಯೊಂದು ರಂಗದಲ್ಲಿ ಅವರೋರ್ವ ಬುದ್ಧಿವಂತ ಮತ್ತು ಸಾಹಸಿ ಸೇನಾನಿಯ ರೂಪದಲ್ಲಿ ಪ್ರತ್ಯಕ್ಷವಾಗುತ್ತಾರೆ.

ಧಾರ್ಮಿಕ ನಾಯಕ ಮತ್ತು ಸೇನಾಧಿಪತಿ - ಈ ಎರಡೂ ಗುಣಗಳನ್ನು ಏಕಕಾಲದಲ್ಲಿ ದರ್ಶಿಸಬಹುದಾಗಿದ್ದರೆ ಅದು ಪ್ರವಾದಿವರ್ಯರ ಜೀವನದಲ್ಲಿ ಮಾತ್ರ!

ಧರ್ಮಯುದ್ಧ ಮತ್ತು ಯುದ್ಧ ವಿದ್ಯೆಯಲ್ಲಿ ಪ್ರವಾದಿವರ್ಯರು ಅತ್ಯಂತ ನಿಪುಣರಾಗಿದ್ದರು. ವಿಶ್ವಾಸ-ಆದರ್ಶದ ಬಲದಿಂದ ತಮ್ಮ ಸಂಗಾತಿಗಳಲ್ಲಿ ಅವರು ಕುದುರಿಸಿದ ಶೌರ್ಯವು ಇತಿಹಾಸದಲ್ಲೇ ಅತ್ಯಂತ ಮಹತ್ಸಾಧನೆ ಎನಿಸಿದೆ.

ಪ್ರವಾದಿವರ್ಯರು ಸಾಮ್ರಾಜ್ಯ ವಿಸ್ತರಣೆಗಾಗಿಯೋ ಎದುರಾಳಿಗಳನ್ನು ಅಪಮಾನಿಸಲಿಕ್ಕಾಗಿಯೋ ಯುದ್ಧಗಳನ್ನು ಮಾಡಿರಲಿಲ್ಲ. ಕೇವಲ ಸತ್ಯ ಧರ್ಮದ ಉನ್ನತಿಯೇ ಅದರ ಉದ್ದೇಶವಾಗಿತ್ತು. ಅದಕ್ಕಾಗಿಯೇ ಆ ಯುದ್ಧಗಳಿಗೆ ಜಿಹಾದ್(ಧರ್ಮಯುದ್ಧ) ಎಂದು ಹೆಸರಿಸಲಾಯಿತು ಹಾಗೂ ಈ ಯುದ್ಧಗಳಲ್ಲಿ ಮಡಿದವರನ್ನು ಶಹೀದ್(ಹುತಾತ್ಮ) ಎಂದು ಕರೆಯಲಾಯಿತು. ಶಹೀದ್ ಎಂದರೆ ತನ್ನ ಪ್ರಾಣ ಅರ್ಪಿಸಿ ಸತ್ಯದ ಸಾಕ್ಷ್ಯ ವಹಿಸಿದವನೆಂದರ್ಥ.

ಯುದ್ಧರಂಗದಲ್ಲಿ ಗಾಬರಿಗೊಳ್ಳುವುದು, ಬಾಣಗಳ ಸುರಿಮಳೆಗೆ ಹೆದರಿ ಪರಾರಿಯಾಗುವುದು ನರಕವಾಸಕ್ಕೆ ಹೇತುವಾಗುತ್ತದೆ.

ಇದು ಜಿಹಾದ್‌ನ ಬಗ್ಗೆ ಪ್ರವಾದಿವರ್ಯರ ಉನ್ನತ ಶಿಕ್ಷಣವಾಗಿತ್ತು! ಇದರಿಂದಾಗಿಯೇ ಅವರ ಸಂಗಾತಿಗಳು ಸತ್ಯಧರ್ಮದ ಸಂದೇಶ ಹೊತ್ತು ಸ್ಪೈಯಿನ್‌ನಿಂದ ಚೀನಾದ ವರೆಗೆ ಧೈರ್ಯ ಮತ್ತು ಸಾಹಸದೊಂದಿಗೆ ಮುನ್ನುಗ್ಗಿದರು.

ಪ್ರವಾದಿವರ್ಯರು(ಸ) ಬೋಧಿಸಿದ ಶಿಕ್ಷಣಗಳಿಂದ ದೂರ ಸರಿದ ಕ್ಷಣದಿಂದಲೇ ಮುಸ್ಲಿಮರ ಅವನತಿ ಆರಂಭವಾಯಿತು. ಅದಕ್ಕೆ ಮುಂಚೆ ಅವರೆಂದೂ ಸೋಲಿನ ಮುಖ ಕಂಡಿರಲಿಲ್ಲ.

ಪ್ರವಾದಿವರ್ಯರ(ಸ) ಕಾಲದಲ್ಲಿ ರೋಮ್ ಸಾಮ್ರಾಜ್ಯ ಒಂದು ಬೃಹತ್ ಶಕ್ತಿಯಾಗಿತ್ತು. ಆದರೆ ಅವರ ಧೈರ್ಯ ಮತ್ತು ಅಚಂಚಲ ವಿಶ್ವಾಸದೆದುರು ರೋಮ್ ಸಾಮ್ರಾಜ್ಯದ ಶಕ್ತಿಗೆ ನಿಲ್ಲಲಾಗಲಿಲ್ಲ. ಹೌದು, ಅವರೇ ಮರುಭೂಮಿಯಲ್ಲಿ ಹುಟ್ಟಿ ಬೆಳೆದ ಓರ್ವ ಬಡವನಾದ ವ್ಯಕ್ತಿ, ಮುಹಮ್ಮದ್(ಸ). ಅವರೇ ಮುಂದೆ ಮಾನವಕುಲದ ಮಹಾ ನಾಯಕರಾದರು.

ಯುದ್ಧ ಸಾಮಗ್ರಿಗಳಲ್ಲಿ ಚರ್ಮದ ಕಡಿವಾಣ ಕೂಡಾ ಅವರಿಗೆ ಲಭಿಸಿರಲಿಲ್ಲ. ಬೇರೆ ಉಪಾಯವಿಲ್ಲದೆ ಕುದುರೆಗಳಿಗೆ ಬಟ್ಟೆಯ ಕಡಿವಾಣ ಹಾಕಲಾಗುತ್ತಿತ್ತು.

ಒಂದೆಡೆ ಯುದ್ಧ ಸಾಮಗ್ರಿಗಳ ಈ ತರದ ಅಭಾವ! ಇನ್ನೊಂದೆಡೆ ರೋಮ್‌ನ ಬೃಹತ್ ಸಾಮ್ರಾಜ್ಯದ ವೈವಿಧ್ಯಮಯ ಯುದ್ಧೋಪಕರಣಗಳಿಂದ ಸುಸಜ್ಜಿತ ಸೇನೆ! ಅಜಗಜಾಂತರ.

ಆದರೆ ತಮ್ಮ ತತ್ವಾದರ್ಶಗಳ ಮೇಲೆ ಸಂಪೂರ್ಣ ವಿಶ್ವಾಸ ಹೊಂದಿದ ಪ್ರವಾದಿ(ಸ) ಮತ್ತವರ ಸಂಗಾತಿಗಳು ಅಲ್ಲಾಹನ ಮೇಲೆ ಭರವಸೆ ಇರಿಸಿ ಹೋರಾಡಿ ಜಯಶೀಲರಾದರು. ಒಂದೆಡೆ ಅವರು ಲೋಕ ತ್ಯಾಗ ಮಾಡಿದ ಸನ್ಯಾಸಿಗಳಿಗಿಂತ ಹೆಚ್ಚು ನಿಸ್ವಾರ್ಥಿಯೂ ಸರಳ ಸ್ವಭಾವದವರೂ ಆಗಿದ್ದರು. ಇನ್ನೊಂದೆಡೆ ಅವರು ಅರಬ್ ಮತ್ತದರ ಸುತ್ತಮುತ್ತಲ ಪ್ರದೇಶಗಳ ಯಶಸ್ವಿ ಆಡಳಿತಾಧಿಕಾರಿಯಾಗಿದ್ದರು. ಹಾಗಿದ್ದೂ ಅವರ ಜೀವನ ಅತ್ಯಂತ ಸರಳವಾಗಿತ್ತು. ಸಾಮಾನ್ಯ ಮನೆಯಲ್ಲಿ ವಾಸಿಸುತ್ತಿದ್ದರು. ಅವರ ಜೀವನ ಮಟ್ಟವು ಅರಬ್ ಸರದಾರರ ಮತ್ತು ಸಿರಿವಂತರ ರೀತಿಯದ್ದಾಗಿರಲಿಲ್ಲ.

ಅವರ ಆಹಾರವೂ ಅತ್ಯಂತ ಸಾಮಾನ್ಯ ತರದ್ದಾಗಿತ್ತು. ಆಹಾರವಿಲ್ಲದೆ ಉಪವಾಸ ಬೀಳುವ ಸಂದರ್ಭವೂ ಬಂದಿತ್ತು. ಅದನ್ನು ಸ್ಮರಿಸುತ್ತಲೇ ನಮ್ಮ ಕಣ್ಣುಗಳು ತೇವಗೊಳ್ಳುತ್ತವೆ.

ಈ ಗುಣಗಳೆಲ್ಲ ಇಸ್ಲಾಮಿನ ಕೊಡುಗೆಯಾಗಿತ್ತು. ಪ್ರವಾದಿವರ್ಯರು(ಸ) ಅದರ ನೈಜ ವಾಹಕರೂ ಅದರತ್ತ ಕರೆ ನೀಡುವವರೂ ಆಗಿದ್ದರು. ಆದುದರಿಂದಲೇ ನಾನು ಇಸ್ಲಾಮನ್ನು ಪ್ರೀತಿಸುತ್ತೇನೆ.*

ೞ•ೞ

*ಆಗ ಗ್ರಂಥಕರ್ತರು ಇನ್ನೂ ಮುಸ್ಲಿಮರಾಗಿರಲಿಲ್ಲ. ಇಸ್ಲಾಮಿನ ಉದಾತ್ತ ತತ್ವಗಳಿಂದ ಪ್ರಭಾವಿತರಾಗಿ ಇಸ್ಲಾಮನ್ನು ಪ್ರೀತಿಸಿದ್ದರು. -ಅನು.

# ಹ.ಈಸಾ(ಏಸುಕ್ರಿಸ್ತ) ದೇವಪುತ್ರರೇ?

ಪ್ರವಾದಿವರ್ಯರು(ಸ) ಮೂರ್ತಿಗಳನ್ನು ಭಂಜಿಸುವ ಮತ್ತು ಚಿತ್ರಗಳನ್ನು ಕಿತ್ತೊಗೆಯುವ ಒಂದು ಮಹಾನ್ ಕ್ರಾಂತಿಕಾರಿ ಕಾರ್ಯವನ್ನು ನಿರ್ವಹಿಸಿದ್ದರೆಂಬುದನ್ನು ಹಿಂದಿನ ಪುಟಗಳಲ್ಲಿ ಪ್ರಸ್ತಾಪಿಸಿದ್ದೇನಷ್ಟೆ. ಮಾನವ ಇತಿಹಾಸದ ಇನ್ನೊಂದು ಮಹಾನ್ ಕ್ರಾಂತಿಯೂ ಪ್ರವಾದಿವರ್ಯರ(ಸ) ಕೈಯಿಂದ ಸಾಧಿತವಾಯಿತು.

ತಂದೆ, ಮಗ ಮತ್ತು ಪವಿತ್ರಾತ್ಮರ ತ್ರಿಏಕತ್ವವು ಕ್ರೈಸ್ತರ ಮೂಲಭೂತ ವಿಶ್ವಾಸದಲ್ಲಿ ಸೇರಿದೆ. ಪಾಪಿಗಳಿಗೆ ಮೋಕ್ಷ ದೊರಕಿಸಲು ಹಾಗೂ ಮಾನವರ ಪಾಪಗಳ ಶಿಕ್ಷೆ ಸ್ವಯಂ ಅನುಭವಿಸಲು ಹ. ಈಸಾ(ಅ) ಶಿಲುಬೆಯೇರಿ ಜೀವತೆತ್ತರು. ಮತ್ತೆ ಮೂರನೇ ದಿನ ಜೀವಂತರಾಗಿ ತಂದೆಯ ಬಲ ಭಾಗದಲ್ಲಿ ಪೀಠಾರೂಢರಾದರು ಎಂಬುದು ಕ್ರೈಸ್ತರ ವಿಶ್ವಾಸ.

1. ಈಸಾ(ಅ) ದೇವಪುತ್ರರಾಗಿರುವರು.
2. ಅವರು ಮರಣಾನಂತರ ಜೀವಂತವಾದರು.

ಮೇಲ್ಕಾಣಿಸಿದ ಎರಡು ವಿಷಯಗಳನ್ನು ನಂಬದವರು ಕ್ರೈಸ್ತರಾಗಲಾರರು. ಈ ಎರಡು ವಿಶ್ವಾಸಗಳು ಕ್ರೈಸ್ತ ಲೋಕದಲ್ಲಿ ವ್ಯಾಪಿಸಿದ್ದಾಗ ಪ್ರವಾದಿವರ್ಯರು(ಸ) ನಿಯೋಗಿಸಲ್ಪಟ್ಟರು. ಅವರು ಈ ಎರಡೂ ವಿಶ್ವಾಸಗಳನ್ನು ಮಿಥ್ಯವೆಂದು ಸಾರಿದರು. ಹ.ಈಸಾ(ಅ) ದೇವಪುತ್ರನಲ್ಲ- ದೇವಪ್ರವಾದಿಯಾಗಿದ್ದರೆಂದು ಪ್ರವಾದಿವರ್ಯರು(ಸ) ತಿಳಿಸಿದರು.

ವಾಸ್ತವದಲ್ಲಿ ಅವರು ಶಿಲುಬೆಗೇರಲಿಲ್ಲ. ಅವರ ಬಂಧನಕ್ಕಾಗಿ ಜನರ ಒಂದು ಗುಂಪು ಅವರ ಕೋಣೆಗೆ ಪ್ರವೇಶಿಸಿದಾಗ ಆ ಗುಂಪಿನಲ್ಲಿದ್ದವರಲ್ಲೊಬ್ಬ ಪ್ರವಾದಿ ಈಸಾರ(ಅ) ರೂಪದಲ್ಲಿ ಅವರಿಗೆ ಕಾಣಿಸಿದ. ಅವನನ್ನೇ ಅವರು ಗಲ್ಲಿಗೇರಿಸಿದರು. ಕುರ್‌ಆನಿನಲ್ಲಿ ಈ ರೀತಿ ಹೇಳಲಾಗಿದೆ.

"ವಾಸ್ತವದಲ್ಲಿ ಅವರು ಆತನನ್ನು ಕೊಲ್ಲಲೂ ಇಲ್ಲ. ಶಿಲುಬೆಗೇರಿಸಲೂ ಇಲ್ಲ. ವಸ್ತುತಃ ಈ ವಿಷಯವನ್ನು ಅವರಿಗೆ ಸಂಶಯಾಸ್ಪದಗೊಳಿಸಲಾಯಿತು."

(ಪವಿತ್ರ ಕುರ್‌ಆನ್, 4:157)

ಬೈಬಲ್‌ನಲ್ಲಿ ಸಿಗುವ ಪ್ರವಾದಿಗಳ ಹೆಸರಿನ ಪ್ರಸ್ತಾಪವು ಕುರ್‌ಆನಿನಲ್ಲಿಯೂ ಇದೆ. ಉದಾ: ಹ. ಆದಮ್, ಇಬ್ರಾಹೀಮ್, ಇಸ್ಹಾಕ್, ಇಸ್ಮಾಈಲ್, ಯಾಕೂಬ್, ಯೂಸುಫ್,

ಮೂಸಾ, ಹಾರೂನ್, ದಾವೂದ್, ಸುಲೈಮಾನ್, ಯೂನುಸ್, ಇಲ್ಯಾಸ್, ಝುಕರಿಯ್ಯಾ(ಅ) ವಗೈರೆ. ಈ ಪ್ರವಾದಿಗಳ ಜೊತೆಗೇ ಹ. ಈಸಾರ(ಅ) ಹೆಸರನ್ನೂ ಪ್ರಸ್ತಾಪಿಸಲಾಗಿದೆ. ಹ. ಈಸಾ(ಅ) ಓರ್ವ ಪ್ರವಾದಿಯಾಗಿದ್ದರೆಂದೂ ಅವರಲ್ಲಿ ದೇವತ್ವದ ಅಂಶ ಲವಲೇಶವೂ ಇರಲಿಲ್ಲವೆಂದೂ ಕುರ್‌ಆನ್ ಸ್ಪಷ್ಟವಾಗಿ ಸಾರಿ ಹೇಳಿದೆ. ಮುಸ್ಲಿಮರು ಮತ್ತು ಕ್ರೈಸ್ತರೊಳಗೆ ಇರುವ ಭಿನ್ನಾಭಿಪ್ರಾಯಗಳೇನೆಂಬುದು ಇಲ್ಲಿ ಚರ್ಚಾ ವಿಷಯವಲ್ಲ. ಯಾವ ಧರ್ಮವು ಅಂದು ವ್ಯಾಪಕವಾಗಿತ್ತೋ, ಯಾವುದು ಅಂದಿನ ಜಗತ್ತಿನಲ್ಲಿ ಒಂದು ಅಜೇಯ ಶಕ್ತಿಯೆಂದು ಪರಿಗಣಿಸಲ್ಪಟ್ಟಿತ್ತೋ ಅದರ ಮಿಥ್ಯ ವಿಶ್ವಾಸಗಳ ವಿರುದ್ಧ ಪ್ರವಾದಿವರ್ಯರು(ಸ) ಯಾವುದೇ ಸಂಕೋಚವಿಲ್ಲದೆ ಸ್ವರವೆತ್ತಿದರೆಂಬುದೇ ಇಲ್ಲಿ ಗಮನಿಸಬೇಕಾದ ಅಂಶ. ಆದರೆ ಈ ವಿಮರ್ಶೆಗಳಿಂದ ಪ್ರವಾದಿ ಈಸಾರ(ಅ) ಘನತೆ ಗೌರವಗಳಿಗೆ ಯಾವುದೇ ಕುಂದು ಬಾರದಂತೆ ನೋಡಿಕೊಂಡರು.

ಪವಿತ್ರಾತ್ಮನಿಂದ ಪ್ರವಾದಿ ಈಸಾರ(ಅ) ಕೈ ಬಲಪಡಿಸಲಾಗಿತ್ತು. ಅವರ ಮೂಲಕ ಈಸಾರಿಗೆ(ಅ) ಇಂಜೀಲ್ ಅವತೀರ್ಣಗೊಳಿಸಲಾಗಿತ್ತು. ಈ ಎರಡೂ ವಾಸ್ತವಿಕತೆಗಳನ್ನು ಪವಿತ್ರ ಕುರ್‌ಆನಿನಲ್ಲಿ ಬಹಳ ಸ್ಪಷ್ಟ ಶಬ್ದಗಳಲ್ಲಿ ಹೆಮ್ಮೆ ಹಾಗೂ ಗೌರವದೊಂದಿಗೆ ವಿವರಿಸಲಾಗಿದೆ. ಇದೇ ರೀತಿ ಇತರ ಧರ್ಮಗಳಲ್ಲಿರುವ ತಪ್ಪು ವಿಶ್ವಾಸ ಆಚಾರಗಳನ್ನು ಕುರ್‌ಆನ್ ಖಂಡಿಸಿದೆಯಾದರೂ ಅವುಗಳ ಧಾರ್ಮಿಕ ನಾಯಕರನ್ನು ಗೌರವಿಸುವಂತೆ ಉಪದೇಶಿಸಿದೆ.

ತಪ್ಪು ವಿಷಯಗಳ ಖಂಡನೆ, ಧಾರ್ಮಿಕ ವ್ಯಕ್ತಿಗಳ ಗೌರವಾದರ - ಈ ಎರಡು ವಿಷಯಗಳನ್ನು ಇಸ್ಲಾಮ್ ಅವ್ಯಕ್ತವಾಗಿರಿಸಿಲ್ಲ. ಬದಲಾಗಿ ಸ್ಪಷ್ಟ ಶಬ್ದಗಳಲ್ಲಿ ಈ ಎರಡೂ ವಿಷಯಗಳ ಶಿಕ್ಷಣ ನೀಡಿದೆ.

ತುರ್ತು ಸ್ಥಿತಿಯ ವೇಳೆ ಮೀಸಾದಲ್ಲಿ ನನ್ನನ್ನೂ ಜೈಲಿಗೆ ಹಾಕಲಾಗಿತ್ತು. ಆಗ ನನಗೆ ಲೋಕದ ವಿವಿಧ ಧರ್ಮಗಳ ಧಾರ್ಮಿಕ ಗ್ರಂಥಗಳನ್ನು ಅಭ್ಯಸಿಸುವ ಸಂದರ್ಭ ಒದಗಿತು.

ನನ್ನ ಸಂಬಂಧಿಕರು, ಮಿತ್ರರು ಮತ್ತು ಕೆಲವು ಮುಸ್ಲಿಮ್ ಸ್ನೇಹಿತರು ಈ ಪವಿತ್ರ ಗ್ರಂಥಗಳನ್ನು ನನಗೆ ತಲುಪಿಸಿದರು.

ಈ ಎಲ್ಲ ಧರ್ಮ ಗ್ರಂಥಗಳ ಪೈಕಿ ನಾನು ಅತ್ಯಂತ ಪ್ರಭಾವಿತನಾದುದು ಮತ್ತು ನನ್ನ ದೃಷ್ಟಿಗೆ ಅತ್ಯಂತ ಮೆಚ್ಚುಗೆಯಾದುದು ಪವಿತ್ರ ಕುರ್‌ಆನ್ ಆಗಿದೆ.

# ಪವಿತ್ರ ಕುರ್‌ಆನಿನ ವೈಶಿಷ್ಟ್ಯಗಳು

ಧಾರ್ಮಿಕ ಗ್ರಂಥಗಳು ವಿವಿಧ ರೀತಿಯದ್ದಾಗಿವೆ. ಅವುಗಳ ಪೈಕಿ ಪ್ರತಿಯೊಂದಕ್ಕೂ ತನ್ನದೇ ಆದ ವೈಶಿಷ್ಟ್ಯವಿದೆ.

ಹಿಂದೂ ಧರ್ಮದ ಅತ್ಯಂತ ಪವಿತ್ರ ಗ್ರಂಥ ವೇದಗಳಾಗಿವೆ. ಋಷಿಮುನಿಗಳು ದೇವಸ್ತುತಿಯಲ್ಲಿ ಹಾಡಿದ ಕವಿತೆಗಳ ಸಂಗ್ರಹವೇ ಈ ವೇದಗಳು.

ಕ್ರೈಸ್ತರ ಇಂಜೀಲ್ ಮತ್ತು ಯಹೂದಿಗಳ ತೌರಾತ್‌ನ ಭಾಗಗಳು ವಾಸ್ತವದಲ್ಲಿ ಮಾನವರು ಬರೆದ ಪ್ರವಾದಿಗಳ ಇತಿಹಾಸ ಮತ್ತು ಜೀವನ ಚರಿತ್ರೆಯಾಗಿದೆ.

ಇದೇ ರೀತಿ ಈಗ ಕಾಣಸಿಗುವ ಎಲ್ಲ ಧಾರ್ಮಿಕ ಗ್ರಂಥಗಳು ಕೆಲವು ಮಹಾಪುರುಷರು ದೇವಸ್ತುತಿಯಲ್ಲಿ ಹಾಡಿದ ಕವಿತೆಗಳಾಗಿವೆ ಅಥವಾ ಮನುಷ್ಯರು ಬರೆದಿಟ್ಟ ಪ್ರವಾದಿಗಳ ಮತ್ತು ಮಹಾಪುರುಷರ ಚರಿತ್ರೆಯ ಸಂಗ್ರಹವಾಗಿದೆ.

ಇದಕ್ಕೆ ವ್ಯತಿರಿಕ್ತವಾಗಿ ಪವಿತ್ರ ಕುರ್‌ಆನ್ ಪ್ರವಾದಿವರ್ಯರು ಬರೆದ ಗ್ರಂಥವಲ್ಲ. ದೇವಸ್ತುತಿಯಲ್ಲಿ ಹಾಡಿದ ಮಾನವರ ಕವಿತೆಗಳ ಸಂಗ್ರಹವೂ ಅಲ್ಲ. ಅಂತೆಯೇ ಅದು ಕೇವಲ ಇತಿಹಾಸ ಗ್ರಂಥವಲ್ಲವೆಂಬುದೂ ಅದರ ವೈಶಿಷ್ಟ್ಯ.

ಅಲ್ಲಾಹನು 'ಲೌಹುಲ್ ಮಹ್‌ಫೂಝ್'(ಸುರಕ್ಷಿತ ಫಲಕ)ನಲ್ಲಿ ಇರಿಸಿರುವ ಗೌರವಾನ್ವಿತ ಗ್ರಂಥವೇ ಪವಿತ್ರ ಕುರ್‌ಆನ್.

ಸುರಕ್ಷಿತ ಫಲಕದ ಆ ಗ್ರಂಥದಿಂದ ಆದರಣೀಯ ದೇವಚರ ಜಿಬ್ರೀಲ್(ಅ) ಆಗಾಗ ಪ್ರವಾದಿ ಮುಹಮ್ಮದ್‌ರಿಗೆ(ಸ) ಅದನ್ನು ತಲುಪಿಸಿದರು.

ಇದುವೇ ಮುಸ್ಲಿಮರ ವಿಶ್ವಾಸ. ಪವಿತ್ರ ಕುರ್‌ಆನ್ ಬರೆಯಲ್ಪಟ್ಟ ಗ್ರಂಥವಲ್ಲ. ಅವತೀರ್ಣಗೊಂಡ ಗ್ರಂಥವಾಗಿದೆ. ಮುಸ್ಲಿಮರು ಈ ಬಗ್ಗೆ ಅಚಲ ವಿಶ್ವಾಸ ಹೊಂದಿದ್ದಾರೆ.

ಈ ಗ್ರಂಥಕ್ಕೆ ಹಲವಾರು ವೈಶಿಷ್ಟ್ಯಗಳಿವೆ. ಅದರ ಪದಗಳ ಕರ್ಣ ಮಾಧುರ್ಯದಿಂದ ನಾನು ಪುಳಕಿತನಾದೆ. ಶಬ್ದಕ್ಕೆ ಯಾವುದಾದರೂ ರೀತಿಯ ಪಾವಿತ್ರ್ಯತೆ ಇದೆಯೇ? ನನ್ನ ಅಭಿಪ್ರಾಯದ ಪ್ರಕಾರ ಇದೆ. ಶಬ್ದವೇ ಲೋಕದ ಬುನಾದಿ.

"ಓಂ" ಶಬ್ದದಿಂದ ಲೋಕದ ಸೃಷ್ಟಿಯಾಯಿತೆಂದು ವೇದ ಹೇಳುತ್ತದೆ. ಮೊಟ್ಟಮೊದಲು ದೇವವಾಣಿಯಿತ್ತು. ಆ ಬಳಿಕ ಈ ಲೋಕದ ಸೃಷ್ಟಿಯಾಯಿತೆಂದು ಬೈಬಲ್ ಹೇಳುತ್ತದೆ.

ಪವಿತ್ರ ಕುರ್‌ಆನಿನ ಶಬ್ದವು ಒಂದೆಡೆ ಅತ್ಯುತ್ತಮ ಗದ್ಯದ ಶಬ್ದವಾಗಿದ್ದರೆ, ಇನ್ನೊಂದೆಡೆ ಅದರಲ್ಲಿಯೇ ಅತ್ಯುತ್ತಮ ಕವಿತೆಯ ಇಂಪೂ ಇದೆ. ಒಂದು ಅತ್ಯುತ್ತಮ

ದೃಶ್ಯದ ಮನೋಹರತೆಯೂ ಅದರಲ್ಲಿದೆ. ಗದ್ಯ-ಪದ್ಯಗಳ ಸಮ್ಮಿಶ್ರ, ಮನೋಹರತೆಯ ಸಂಯೋಜನೆಯೇ ಕುರ್‌ಆನಿನ ಶಬ್ದ.

ಇದಕ್ಕೆ ಸರಿಸಾಟಿಯಾಗಬಲ್ಲ ಬೇರೆ ವಾಣಿ ಅಸಾಧ್ಯವಾದಷ್ಟು ಈ ವಾಣಿಯು ಸುಂದರವಾಗಿದೆಯೇ? ಈ ಪ್ರಶ್ನೆಯನ್ನು ಇಂದಿಗೂ ಹಾಕಬಹುದಾಗಿದೆ. ಕುರ್‌ಆನ್ ಅವತೀರ್ಣವಾಗುತ್ತಿದ್ದ ಕಾಲದಲ್ಲೂ ಹಾಕಲಾಗಿತ್ತು. ಈ ರೀತಿಯ ವಾಣಿಯನ್ನು ಸಾಧ್ಯವಿದ್ದರೆ ತನ್ನಿ ಎಂದು ಕುರ್‌ಆನ್ ಈ ಪ್ರಶ್ನೆಗೆ ಆಗಲೇ ಉತ್ತರಿಸಿತ್ತು.

ಈ ಪಂಥಾಹ್ವಾನಕ್ಕೆ ಉತ್ತರ ನೀಡಲು ಜಗತ್ತು ಇಂದಿಗೂ ಅಶಕ್ತವಾಗಿದೆ. ಅದರ ಪ್ರಯತ್ನ ಮಾಡಿದವರೆಲ್ಲರೂ ಸೋಲನ್ನೇ ಅನುಭವಿಸಿದರು.

ಕುರ್‌ಆನ್ ಹೇಳುತ್ತದೆ "ಓ ಪ್ರವಾದಿಯವರೇ, ನಾವು ನಿಮಗೆ ಕೌಸರ್ ದಯಪಾಲಿಸಿದೆವು. ನೀವು ನಿಮ್ಮ ಪ್ರಭುವಿಗಾಗಿಯೇ ನಮಾಝ್ ನಿರ್ವಹಿಸಿರಿ ಮತ್ತು ಬಲಿದಾನ ನೀಡಿರಿ. ಖಂಡಿತ ನಿಮ್ಮ ಶತ್ರುವೇ ನಿಸ್ಸಂತಾನನು."

(ಪವಿತ್ರ ಕುರ್‌ಆನ್, 108:1-3)

ಈ ರೀತಿ ಈ ಗ್ರಂಥದ ವಚನಗಳು ಸೌಂದರ್ಯ ಮತ್ತು ಯುಕ್ತಿಯಿಂದ ತುಂಬಿ ತುಳುಕುತ್ತಿವೆ. ಇದಕ್ಕೆದುರಾಗಿ ಒಂದು ವಾಣಿ ರಚಿಸಲು ಅರಬೀ ಕವಿವರೇಣ್ಯರು ಅದೇ ಕಾಲದಲ್ಲಿ ಪ್ರಯತ್ನಿಸಿ ಈ ರೀತಿ ಸೋಲೊಪ್ಪಿ ಕೊಂಡಿದ್ದಾರೆ. "ಇದು ಮನುಷ್ಯ ವಾಣಿ ಆಗಲು ಸಾಧ್ಯವಿಲ್ಲ."

"ಮನುಷ್ಯ ಮತ್ತು ಜಿನ್ನ್ ವರ್ಗಗಳು ಸೇರಿ ಇಂತಹ ಒಂದು ವಾಣಿ ರಚಿಸಿ ತರಲು ಪ್ರಯತ್ನಿಸಿದರೂ ಅವರಿಂದ ಸಾಧ್ಯವಾಗದು. ಅವರೆಲ್ಲರೂ ಪರಸ್ಪರ ಸಹಕರಿಸಿದರೂ ಸರಿಯೇ" ಎಂದು ಕುರ್‌ಆನ್ ಪಂಥಾಹ್ವಾನ ನೀಡಿತು. (ಪವಿತ್ರ ಕುರ್‌ಆನ್, 17:88)

ಪವಿತ್ರ ಕುರ್‌ಆನಿನಲ್ಲಿ ಅದರ ಈ ಕೆಳಗಿನ ಹೆಸರುಗಳು ನಮಗೆ ಸಿಗುತ್ತವೆ. ಈ ಎಲ್ಲಾ ಹೆಸರುಗಳಿಗೂ ಬಹಳ ಮಹತ್ವವಿದೆ ಹಾಗೂ ಅವು ದೊಡ್ಡ ವಾಸ್ತವಿಕತೆಗಳ ಪ್ರತೀಕವಾಗಿದೆ.

ಅಲ್ ಕಿತಾಬ್-ಗ್ರಂಥ, ಹಬ್ಲುಲ್ಲಾಹ್-ಅಲ್ಲಾಹನ ಪಾಶ, ಅಲ್ ಬಯಾನ್-ಸ್ಪಷ್ಟವಾದ ವಿವರಣೆ, ಅಲ್ ಬುರ್ಹಾನ್-ಸ್ಪಷ್ಟ ನಿದರ್ಶನ, ಅಲ್ ಮುಹೈಮಿನ್-ಸಂರಕ್ಷಿಸುವ, ಅಲ್ ಮುಬಾರಕ್-ಸಮೃದ್ಧಿಯುಳ್ಳ, ಅಲ್ ಮುಸದ್ದಿಕ್-ದೃಢಪಡಿಸುವ, ಅದ್ದಿಕ್ರಾ-ಉಪದೇಶ ಮಾಡುವ, ಅನ್ನೂರ್-ಬೆಳಕು, ಅಲ್ ಬಸಾಇರ್-ದೂರದರ್ಶಿತ್ವ ನೀಡುವ, ಅಲ್ ಹುದಾ-ಸನ್ಮಾರ್ಗದರ್ಶಕ, ಅರ್ರಹ್ಮಃ-ಕರುಣೆ, ಅಶ್ಶಿಫಾ-ಗುಣಪಡಿಸುವ, ಅಲ್ ಮೌಇದಃ-ಎಚ್ಚರಿಕೆ ನೀಡುವ, ಅಲ್ ಹಕಮ್-ಆಜ್ಞೆ ಮಾಡುವ, ಅಲ್ ಮುಬೀನ್-ಸ್ಪಷ್ಟ, ಅಲ್ ಅರಬಿ - ಅರಬಿ ಭಾಷೆಯ, ಅಲ್ ಹಿಕ್ಮಃ - ಯುಕ್ತಿಪೂರ್ಣ, ಅಲ್ ಹಕ್-ಸತ್ಯ, ಅಲ್ ಕಯ್ಯಿಮ್-ಬಲಿಷ್ಠ, ಅಲ್ ಫುರ್ಕಾನ್-(ಸತ್ಯಾಸತ್ಯ) ವಿವೇಚಕ, ಅತ್ತನ್‌ಝೀಲ್-ಅವತೀರ್ಣವಾಗುವ, ಅಲ್ ಹಕೀಮ್-ಯುಕ್ತಿಜ್ಞ, ಅದ್ದಿಕ್ರ್-ನೆನಪಿಸುವ, ಅಲ್ ಬಶೀರ್-

ಸುವಾರ್ತೆ ನೀಡುವ, ಅನ್ನದೀರ್-ಎಚ್ಚರಿಸುವ, ಅಲ್ ಅಝೀಝ್-ಅಜೇಯ, ಅರ್ರೂಹ್-ಜೀವಂತ, ಅಲ್ ಮಜೀದ್-ಗೌರವಾನ್ವಿತ, ಅಲ್ ಕರೀಮ್-ಹಿರಿಮೆಯುಳ್ಳ, ಅಲ್ ಮುಕರ್‍ರಮಃ - ಬಹುಮಾನ್ಯ, ಅಲ್ ಅಜೀಬ್-ವೈಚಿತ್ರ್ಯಪೂರ್ಣ, ಅಲ್ ಮರ್ಫೂಅ-ಉನ್ನತ,ಎತ್ತಲ್ಪಟ್ಟ, ಅಲ್ ಮುತಹ್ಹರಃ-ಪವಿತ್ರ, ಅನ್ನಿಅ್‌ಮಃ- ಅನುಗ್ರಹ.

ಇದಲ್ಲದೆ ಕುರ್‌ಆನ್ ಎಂಬುದರ ಅರ್ಥ ಓದಲ್ಪಡುವ ಎಂದಾಗಿದೆ.

ಹೌದು, ಇದುವೇ ಓದಲ್ಪಡುವ ಗ್ರಂಥ. ಲೋಕದಲ್ಲಿ ಅತ್ಯಂತ ಹೆಚ್ಚು ಓದಲ್ಪಡುವ ಗ್ರಂಥ.*

ಅ•ಐ

*ಕುರ್‌ಆನ್ ಅಧ್ಯಯನ ಮಾಡುವ ಮತ್ತು ಕುರ್‌ಆನಿನ ಕುರಿತು ತಿಳುವಳಿಕೆ ಪಡೆಯುವ ಓರ್ವ ನಿಷ್ಪಕ್ಷಪಾತಿಯ ಅಭಿಪ್ರಾಯಗಳಿವು. -ಅನು.

# ನಿರಕ್ಷರಿಯಾದ ಪ್ರವಾದಿ

**ದೇ**ವನಿಂದ ಅವತೀರ್ಣವಾದ ಗ್ರಂಥವನ್ನು ಮೊಟ್ಟಮೊದಲು ಓದಿದ ವ್ಯಕ್ತಿ ಉಮ್ಮಿ(ನಿರಕ್ಷರಿ)ಯಾಗಿದ್ದರು.

ಉಮ್ಮಿ(ನಿರಕ್ಷರಿ) ಎಂದರೆ ಬುದ್ಧಿಹೀನ ಅಥವಾ ವಿಚಾರಶೂನ್ಯವೆಂದರ್ಥವಲ್ಲ. ಓದು ಬರಹ ಬಾರದಿದ್ದರೂ ಅಧಿಕ ಜ್ಞಾಪಕಶಕ್ತಿ ಹೊಂದಿದವರನ್ನು ಉಮ್ಮಿ(ನಿರಕ್ಷರಿ) ಎನ್ನಲಾಗುತ್ತದೆ.

ತಮಿಳು ಸಾಹಿತ್ಯದಲ್ಲಿ ಒಂದು ಪದ್ಯವನ್ನು ಒಂದು ಸಲ ಆಲಿಸಿ ಪುನರುಚ್ಚರಿಸುವವರು, ಎರಡು ಸಲ ಆಲಿಸಿ ಪುನರುಚ್ಚರಿಸುವವರು, ಮೂರು ಸಲ ಆಲಿಸಿ ಪುನರುಚ್ಚರಿಸುವವರು, ನಾಲ್ಕು ಸಲ ಆಲಿಸಿ ಪುನರುಚ್ಚರಿಸುವವರು ಕ್ರಮಪ್ರಕಾರ ಪ್ರಶಂಸೆಗೆ ಪಾತ್ರರಾಗುತ್ತಾರೆ. ಆದರೆ ಅರಬೀ ಸಾಹಿತ್ಯದಲ್ಲಿ ಸಹಸ್ರಾರು ಪದ್ಯಗಳನ್ನು ಕಂಠಸ್ಥಗೊಳಿಸಿದವರಿಗೂ ಉಮ್ಮಿ(ನಿರಕ್ಷರಿ) ಎನ್ನಲಾಗುತ್ತಿತ್ತು.

ಕಾವ್ಯದಲ್ಲಿ ಮಾತ್ರವಲ್ಲ ಗಣಿತ ಶಾಸ್ತ್ರದಲ್ಲೂ ಅದ್ಭುತ ಜ್ಞಾಪಕಶಕ್ತಿ ಹೊಂದಿದವರಿರುತ್ತಾರೆ. 214 ನ್ನು 314 ರಿಂದ ಗುಣಿಸಬೇಕಾದರೆ ದೊಡ್ಡ ದೊಡ್ಡ ವಿದ್ಯಾವಂತರೇ ಬಹಳ ಸಮಯ ತೆಗೆದುಕೊಳ್ಳುತ್ತಾರೆ. ಆದರೆ ಸಾಮಾನ್ಯವಾಗಿ ನಿರಕ್ಷರಿಗಳಾದ ಕೆಲವು ಅದ್ಭುತ ಜ್ಞಾಪಕಶಕ್ತಿಯವರು ಅದರ ಉತ್ತರ ತತ್‌ಕ್ಷಣ ಹೇಳಿಬಿಡುತ್ತಾರೆ. ಅಂತೆಯೇ ವಂಶ ಪರಂಪರೆಯ ಬಗ್ಗೆ ಹಲವು ಪೀಳಿಗೆಗಳ ತನಕ ವಂಶವೃಕ್ಷವನ್ನು ಕ್ಷಣಾರ್ಧದಲ್ಲಿ ಹೇಳುವ ನಿರಕ್ಷರಿಗಳೂ ಅರಬರಲ್ಲಿದ್ದರು.

ಉಮ್ಮಿ ಎಂದರೆ ವಿಚಾರಶೂನ್ಯ ಎಂದರ್ಥವಲ್ಲ. ಹಾಗಿರುತ್ತಿದ್ದರೆ ಪ್ರವಾದಿವರ್ಯರ(ಸ) ವ್ಯಾಪಾರ, ವಿಚಾರಶೀಲತೆ ಮತ್ತಿತರ ಹಲವಾರು ಘಟನೆಗಳು ಅರ್ಥಶೂನ್ಯವೆನಿಸುತ್ತವೆ. ಪ್ರವಾದಿವರ್ಯರು ಓದು ಬರಹ ಬಲ್ಲವರಾಗಿರದಿದ್ದರೂ ಉತ್ತಮ ಜ್ಞಾಪಕಶಕ್ತಿ ಮತ್ತು ಉಚ್ಚ ವಿಚಾರಶೀಲತೆಯನ್ನು ಹೊಂದಿದ್ದರು.

ಈ ವೈಶಿಷ್ಟ್ಯದಿಂದಾಗಿಯೇ ಪ್ರಥಮ ವಹೀ(ದೇವವಾಣಿ) ಅವತೀರ್ಣವಾದೊಡನೆ ಅದನ್ನವರು ನೆನಪಿನಲ್ಲಿಟ್ಟು ಅಕ್ಷರಶಃ ಪುನರುಚ್ಚರಿಸಿದರು.

ಪ್ರವಾದಿವರ್ಯರಿಗೆ(ಸ) ಅಲ್ಲಾಹನ ಸಹಾಯ ಪ್ರಾಪ್ತವಿತ್ತು. ಅವರ ಸಂಗಾತಿಗಳ ಮೇಲೆ ಅಲ್ಲಾಹನ ವಿಶೇಷ ಅನುಗ್ರಹವಿತ್ತು. ಅವರ ಬಾಯಿಯಿಂದ ಕೇಳಿದ

ದಿವ್ಯವಾಣಿಯನ್ನೆಲ್ಲಾ ಸಹಾಬಿಗಳು(ಆಪ್ತ ಸಂಗಾತಿಗಳು) ಕಂಠಪಾಠಗೊಳಿಸಿದರು. ಈಗಲೂ ಸಂಪೂರ್ಣ ಕುರ್‌ಆನನ್ನು ಕಂಠಪಾಠಗೊಳಿಸಿದವರನ್ನು ಕಂಡರೆ ಅವರ ಜ್ಞಾಪಕಶಕ್ತಿಯ ಬಗ್ಗೆ ಈರ್ಷ್ಯೆಯಾಗುತ್ತದೆ ಮತ್ತು ಕುರ್‌ಆನಿನ ಮಹಿಮೆಯ ಬಗ್ಗೆ ಆಶ್ಚರ್ಯವಾಗುತ್ತದೆ. ಹೌದು! ಓರ್ವ ನಿರಕ್ಷರಿಯಾದ ವ್ಯಕ್ತಿಯೇ ಈ ಮಹತ್ಕಾರ್ಯವನ್ನು ಸಾಧಿಸಿದರು ಮತ್ತು ಮಹಾನ್ ಸಾಮರ್ಥ್ಯಗಳನ್ನು ಪೋಷಿಸಿ ಬೆಳೆಸಿದರು.

ಅರಬರನ್ನು ಸಾಮಾನ್ಯವಾಗಿ ವಿಚಾರಶೂನ್ಯರು, ಅಜ್ಞಾನಿಗಳು, ಅಜ್ಞಾನದಲ್ಲಿ ಮುಳುಗಿದವರು, ಕೊಲೆಸುಲಿಗೆಗಳಲ್ಲಿ ನಿರತರು, ಬುದ್ಧಿಹೀನರು ಮತ್ತು ಅನಾಗರಿಕರು ಎಂದು ವರ್ಣಿಸಲಾಗುತ್ತದೆ. ಈ ಎಲ್ಲ ವಿಷಯಗಳೂ ತಪ್ಪಾಗಿವೆ. ಸಹಸ್ರಾರು ವರ್ಷಗಳ ಹಿಂದೆ ಲೋಕದ ಇತರೆಡೆಗಳಲ್ಲಿ ವಾಸಿಸುವ ಜನರಲ್ಲಿದ್ದ ಗುಣದೋಷಗಳೆಲ್ಲಾ ಅರಬರಲ್ಲೂ ಇದ್ದುವು. ಆದರೆ ಹೆಚ್ಚು ಓದು ಬರಹ ಬಲ್ಲವರಾಗಿರದಿದ್ದರೂ ಅವರ ಜ್ಞಾಪಕಶಕ್ತಿಯು ಅದ್ಭುತವಾಗಿತ್ತೆಂಬುದೇ ಅವರ ವಿಶೇಷತೆ. ಇತರ ದೇಶಗಳ ಜನರ ಜ್ಞಾಪಕಶಕ್ತಿಯು ಅವರಿಗಿಂತ ಎಷ್ಟೋ ಕಡಿಮೆಯಿತ್ತು. ಕೇವಲ ವಿದ್ಯೆಯ ಕೊರತೆಯಿಂದ ಅಜ್ಞಾನ ಬಂದು ಬಿಡುವುದಿಲ್ಲ.

ಅರಬರಿಗಿಂತ ಮಿಗಿಲಾದ ತಿಳಿಗೇಡಿತನಗಳ ಪ್ರದರ್ಶನ ಎಷ್ಟೋ ದೇಶಗಳಲ್ಲಾಗಿವೆ. ಮನುಷ್ಯರ ಶಿರಗಳನ್ನು ಕಡಿದು ಕೋಟೆಗಳಲ್ಲಿ ನೇತಾಡಿಸಲಾಗುತ್ತಿತ್ತು. ಜೀವಂತ ಮನುಷ್ಯರ ಮೇಲೆ ಕೋಟೆಯನ್ನು ನಿರ್ಮಿಸಲಾಗುತ್ತಿತ್ತು. ಆನೆಗಳ ಪಾದದಡಿಯಲ್ಲಿ ಅವರನ್ನು ತುಳಿಸಲಾಗುತ್ತಿತ್ತು. ಶಿಲುಬೆಗೇರಿಸಿ ಮೊಳೆ ಹೊಡೆಯಲಾಗುತ್ತಿತ್ತು. ಸುಣ್ಣದ ರಾಶಿಯಲ್ಲಿ ಹುದುಗಿಸಲಾಗುತ್ತಿತ್ತು. ಜೀವಂತ ಹೂಳಲಾಗುತ್ತಿತ್ತು. ಹಸಿದ ಹುಲಿಯ ಮುಂದೆ ಆಹಾರದ ರೂಪದಲ್ಲಿ ಎಸೆಯಲಾಗುತ್ತಿತ್ತು. ರೋಮ್‌ನಿಂದ ಹಿಡಿದು ತಮಿಳ್ನಾಡಿನ ತನಕ ಈ ಎಲ್ಲಾ ದೃಶ್ಯಗಳು ಇತಿಹಾಸದ ಪುಟಗಳಲ್ಲಿ ನಮಗೆ ಕಾಣಸಿಗುತ್ತವೆ.

ಅರಬರ ಅಜ್ಞಾನ ಇದಕ್ಕಿಂತ ಮಿಗಿಲಾಗಿತ್ತೇ? ಆದುದರಿಂದ ಇದು ಅರಬರ ಮೇಲೆ ಹೊರಿಸಲಾಗುತ್ತಿರುವ ತೀರಾ ಕ್ಷುಲ್ಲಕ ಆರೋಪ. ಪ್ರವಾದಿವರ್ಯರ ಸಂದೇಶ ಪ್ರಚಾರವನ್ನು ಅರಬರು ಎದುರಿಸುತ್ತಿದ್ದರೆಂದೂ ಅವರನ್ನು ಹಿಂಸಿಸುತ್ತಿದ್ದರೆಂದೂ ಹೇಳಲಾಗುತ್ತದೆ. ಪ್ರವಾದಿವರ್ಯರೊಂದಿಗೆ(ಸ) ಅತ್ಯಧಿಕ ಪ್ರೀತಿ ಮತ್ತು ಸಹಕಾರದಿಂದ ವರ್ತಿಸಿದ ಮದೀನಾ ನಿವಾಸಿಗಳೂ ಅರಬರೇ ಆಗಿದ್ದರು. ಅವರು ಪ್ರವಾದಿವರ್ಯರಿಗಾಗಿ(ಸ) ಪ್ರಾಣಾರ್ಪಣೆಗೈದರು. ಪ್ರವಾದಿವರ್ಯರ ನೇತೃತ್ವದ ಅನೇಕ ಯುದ್ಧಗಳಲ್ಲಿ ಪ್ರಾಣದ ಹಂಗು ತೊರೆದು ಹೋರಾಡಿದರು.

ಕಅಬಾ ಭವನದಿಂದ ವಿಗ್ರಹಗಳನ್ನು ಕಿತ್ತೊಗೆಯುವ ಮತ್ತು ಅವುಗಳ ಆರಾಧನೆಯನ್ನು ಮಿಥ್ಯವೆಂದು ಸಾರುವ ಕ್ರಾಂತಿಕಾರಿ ಕಾರ್ಯವು ಪ್ರವಾದಿವರ್ಯರ(ಸ) ನೇತೃತ್ವದಲ್ಲಿ ಅದೇ ಅರಬರ ಕರಗಳಿಂದಲೇ ನೆರವೇರಿತು.

ಈ ಮಹಾನ್ ಕ್ರಾಂತಿ 14 ಶತಮಾನಗಳ ಹಿಂದೆ ಭಾರತ, ಚೀನಾ ಅಥವಾ ಇನ್ನಾವುದೇ ಇತರ ರಾಷ್ಟ್ರದಲ್ಲಿ ಬಂದಿದ್ದರೆ ಅಲ್ಲಿನ ಪ್ರಜೆಗಳು ಈ ಬಗ್ಗೆ ತಮ್ಮ ಸ್ಥೈರ್ಯವನ್ನು ಅರಬರು ಪ್ರದರ್ಶಿಸಿದಂತೆಯೇ ಪ್ರದರ್ಶಿಸುತ್ತಿದ್ದರೇ?

ಈ ದೃಷ್ಟಿಕೋನದಿಂದ ನಾವು ಅರಬರನ್ನು ವೀಕ್ಷಿಸಿದರೆ ಅವರ ಮಹಾನತೆಯು ನಮಗೆ ವೇದ್ಯವಾಗುತ್ತದೆ. ಅರೇಬಿಯಾ ಒಂದು ಮರುಭೂಮಿ. ಹೌದು! ಆ ಮರಳು ಗಾಡಿನಲ್ಲೇ ಈ ಮಹಾನ್ ಕ್ರಾಂತಿ ಬಂತು. ಈ ನೆಲೆಯಲ್ಲಿ ನಾನು ಆ ದೇಶವನ್ನು ಮತ್ತು ಅಲ್ಲಿನ ಪ್ರಜೆಗಳನ್ನು ಗೌರವಾದರಗಳ ದೃಷ್ಟಿಯಿಂದ ನೋಡುತ್ತೇನೆ. ಅವರಿಗೆ ನನ್ನ ಸಹಸ್ರ ಸಲಾಮ್‌ಗಳು.

ಈ ಕ್ರಾಂತಿಗೆ ಜನ್ಮ ನೀಡಿದ ಆ ಮಹಾನ್ ಗ್ರಂಥದ ಇನ್ನೂ ಕೆಲವು ವೈಶಿಷ್ಟ್ಯಗಳನ್ನು ಮುಂದಿನ ಲೇಖನದಲ್ಲಿ ಓದಿರಿ.

# ಜೀವಂತ ಭಾಷೆಯಲ್ಲಿ ಜೀವಂತ ಗ್ರಂಥ

ವೇದ, ಬೈಬಲ್ ಮತ್ತಿತರ ಧಾರ್ಮಿಕ ಗ್ರಂಥಗಳಿಗೂ ಪವಿತ್ರ ಕುರ್‌ಆನಿಗೂ ಒಂದು ಮಹಾ ವ್ಯತ್ಯಾಸವಿದೆ.

ಹಿಂದೂ ಧರ್ಮದ ಮೂಲಭೂತ ಧಾರ್ಮಿಕ ಗ್ರಂಥಗಳು ನಾಲ್ಕು ವೇದಗಳಾಗಿವೆ. ಆ ವೇದಗಳ ಭಾಷೆ ಸಂಸ್ಕೃತ.

ಸಂಸ್ಕೃತದ ಅರ್ಥವೇ ಹೊಸ ಭಾಷೆ ಮತ್ತು ಸಂಸ್ಕರಣಗೊಂಡ ಭಾಷೆ ಎಂದಾಗಿದೆ.

ಕೆಲವರು ನಂಬುವಂತೆ ವೇದಗಳು ಮಾನವನ ಆರಂಭದಿಂದಲೇ ಲಭಿಸಿದೆಯೆಂದಾದರೆ ಅದು ಮೂಲತಃ ಸಂಸ್ಕೃತದಲ್ಲಿಲ್ಲವೆಂದರ್ಥ. ಅದಕ್ಕಿಂತ ಮೊದಲಿನ ಯಾವುದೋ ಭಾಷೆಯಲ್ಲಿದ್ದಿರಬೇಕು.

ಆ ಬಳಿಕ ಬಂದ ಭಾಷೆಯಲ್ಲಿ ವೇದಗಳನ್ನು ಬರೆದಾಗ ಮೂಲ ವೇದಗಳಲ್ಲೂ ಹೊಸ ಭಾಷೆಯಲ್ಲಿ ಬರೆದಿಟ್ಟ ವೇದಗಳಲ್ಲೂ ವ್ಯತ್ಯಾಸ ಬರುವುದು ಸ್ವಾಭಾವಿಕ.

ಆದರೆ ಪವಿತ್ರ ಕುರ್‌ಆನ್ ಅರಬಿ ಭಾಷೆಯಲ್ಲಿ ಅವತೀರ್ಣಗೊಂಡು ಅದೇ ಭಾಷೆಯಲ್ಲಿ ಲವಲೇಶವೂ ವ್ಯತ್ಯಾಸವಿಲ್ಲದೆ ಇಂದಿಗೂ ನಮ್ಮ ಮುಂದಿದೆ.

ಯಹೂದಿಗಳ ತೌರಾತನ್ನು ನೋಡಿರಿ. ಅದರ ಅವತೀರ್ಣದ ಶತಮಾನಗಳ ಬಳಿಕ ಇಸ್ರಾಈಲರು ಅದನ್ನು ಕ್ರೋಡೀಕರಿಸಿದರು.

ವಾಸ್ತವವಾಗಿ ತೌರಾತ್ ಹಿಬ್ರೂ ಭಾಷೆಯಲ್ಲಿ ಹ.ಮೂಸಾರವರ ಮೇಲೆ ಅವತೀರ್ಣವಾಗಿತ್ತು. ನೂರಾರು ವರ್ಷಗಳ ಬಳಿಕ ಅದನ್ನು ಬರೆಯಲಾಯಿತು. ಆ ಬಳಿಕ ಬರೆಯಲ್ಪಟ್ಟ ಈ ಗ್ರಂಥವು ನಷ್ಟಗೊಂಡಿತು. ಲ್ಯಾಟಿನ್ ಮತ್ತು ಗ್ರೀಕ್ ಭಾಷೆಯ ಬೈಬಲ್ ಮಾತ್ರ ಉಳಿದುವು. ತರುವಾಯ ಇಸ್ರಾಈಲರು ಅದನ್ನು ಹಿಬ್ರೂ ಭಾಷೆಗೆ ಭಾಷಾಂತರಿಸಿದರು. ಈ ರೀತಿ ಭಾಷಾಂತರದಿಂದ ಮೂಲ ಭಾಷೆಗೆ ವರ್ಗಾಯಿಸಲ್ಪಟ್ಟ ಗ್ರಂಥದ ಅವಸ್ಥೆ ಹೇಗಿರಬಹುದೆಂದು ಯಾರೂ ಊಹಿಸಬಹುದಾಗಿದೆ. ಮೃತ ಸಮುದ್ರದ ಬಳಿ ಕಮ್ರಾನ್ ಗುಹೆಯಲ್ಲಿ ದೊರೆತಿರುವ ಕಾಗದಗಳು ಬೈಬಲ್‌ನ ಕೆಲವು ಬಿಡಿಭಾಗಗಳು ಮಾತ್ರ. ಇದು ಬೈಬಲ್‌ನ ಅತ್ಯಂತ ನೂತನ ಸಂಶೋಧನೆಯಾಗಿದೆ.

ಅನುವಾದ ಕೃತಿಗಳ ಹಂಗೇ ಇಲ್ಲದೆ, ಅವತೀರ್ಣವಾದ ಭಾಷೆಯಲ್ಲಿ ಒಂದು ಗ್ರಂಥ ಇದೆಯೆಂದಾದರೆ ಅದು ಕೇವಲ ಪವಿತ್ರ ಕುರ್‌ಆನ್ ಮಾತ್ರ.

ಹ. ಈಸಾರಿಗೆ ಅವತೀರ್ಣವಾದ ಗ್ರಂಥವು ಸುರ್ಯಾನಿ ಭಾಷೆಯ ಒಂದು ಉಪ ಭಾಷೆಯಾದ ಆರಾಮಿ ಭಾಷೆಯಲ್ಲಿತ್ತು. ಆದರೆ ಅದನ್ನು ಮೊಟ್ಟಮೊದಲು ಗ್ರೀಕ್ ಭಾಷೆಯಲ್ಲಿ ಬರೆಯಲಾಯಿತು. ಆ ಬಳಿಕ ಗ್ರೀಕ್‌ನಿಂದ ಲ್ಯಾಟಿನ್ ಭಾಷೆಗೆ ಅನುವಾದಿಸ ಲಾಯಿತು. ತರುವಾಯ ಅನೇಕ ಭಾಷೆಗಳಿಗೆ ಅದನ್ನು ತರ್ಜುಮೆ ಮಾಡಲಾಯಿತು. ಈ ರೀತಿ ಬೈಬಲ್ ತನ್ನ ಮೂಲ ಭಾಷೆಯಲ್ಲಿ ಇಂದು ಉಳಿದಿಲ್ಲ. ನಮ್ಮಲ್ಲಿರುವುದು ಅದರ ಅನುವಾದದ ಭಾಷೆಯಲ್ಲಿ ಮಾತ್ರ.

ಆದರೆ ಪವಿತ್ರ ಕುರ್‌ಆನ್ ಯಾವ ಭಾಷೆಯಲ್ಲಿ ಅವತೀರ್ಣಗೊಂಡಿತ್ತೋ ಅದೇ ಭಾಷೆಯಲ್ಲಿ ನಮ್ಮ ಮುಂದಿದೆ.

ಪವಿತ್ರ ಕುರ್‌ಆನಿನ ಇನ್ನೊಂದು ವೈಶಿಷ್ಟ್ಯದ ಬಗ್ಗೆ ಗಮನಿಸಿರಿ.

ಹಿಂದೂ ಧರ್ಮದ ಗ್ರಂಥವಾದ ವೇದವು ಅದರ ಮೂಲ ಭಾಷೆಯ ಬದಲು ಸಂಸ್ಕೃತದಲ್ಲಿ ಬರೆಯಲ್ಪಟ್ಟಿತು. ಆದರೆ ಸಂಸ್ಕೃತವೂ ಇಂದು ಮಾತನಾಡುವ ಭಾಷೆಯಾಗಿ ಉಳಿದಿಲ್ಲ.

ಯಹೂದಿಗಳ ಧರ್ಮಗ್ರಂಥದ ಭಾಷೆ ಹಿಬ್ರೂ ಕೂಡಾ ಅನೇಕ ಶತಮಾನಗಳ ಕಾಲ ಮಾತನಾಡುವ ಭಾಷೆಯಾಗಿರಲಿಲ್ಲ. (ಇಸ್ರೇಲ್ ತನ್ನ ಜನತೆಯ ಮೇಲೆ ಆ ಭಾಷೆಯನ್ನು ಮತ್ತೊಮ್ಮೆ ಹೇರಿದೆ.)

ಇದೇ ರೀತಿ ಈಸಾರ(ಅ) ಆರಾಮಿ ಭಾಷೆ, ಗೌತಮ ಬುದ್ಧರ ಪಾಲಿ ಭಾಷೆಗಳೆರಡೂ ಇಂದು ಮಾತನಾಡುವ ಭಾಷೆಗಳಾಗಿ ಉಳಿದಿಲ್ಲ.

ಯಾವ್ಯಾವ ಭಾಷೆಗಳಲ್ಲಿ ದೇವಗ್ರಂಥಗಳು ಅವತೀರ್ಣಗೊಂಡಿದ್ದುವೋ ಆ ಭಾಷೆಗಳೆಲ್ಲಾ ಇಂದು ಬಳಕೆಯಲ್ಲಿಲ್ಲದ ಭಾಷೆಗಳಾಗಿವೆ. ಇದಕ್ಕೆ ವಿರುದ್ಧವಾಗಿ ಕುರ್‌ಆನ್ ಮಾತ್ರ ಮಾತನಾಡುವ ಜೀವಂತ ಭಾಷೆಯಲ್ಲಿ ಜೀವಂತ ಗ್ರಂಥದ ರೂಪದಲ್ಲಿ ನಮ್ಮ ಮುಂದಿದೆ.

ಕುರ್‌ಆನಿನ ಇನ್ನೊಂದು ಗುಣದ ಬಗ್ಗೆಯೂ ಯೋಚಿಸೋಣ.

❖ ನಾಲ್ಕು ವೇದಗಳು-

❖ ಯಹೂದಿಗಳ ಗ್ರಂಥ ತೌರಾತ್-

❖ ಈಸಾರ(ಅ) ಇಂಜೀಲ್-

❖ ಗೌತಮ ಬುದ್ಧರ ಗ್ರಂಥ "ತಮ್ಮಾಬ್ದಂ"-

ಈ ಗ್ರಂಥಗಳನ್ನು ಹೊಂದಿದ ವ್ಯಕ್ತಿಗಳ ಮರಣದ ದೀರ್ಘ ಕಾಲದ ಬಳಿಕ ಅವುಗಳನ್ನು ಕ್ರೋಡೀಕರಿಸಿ ಗ್ರಂಥರೂಪ ನೀಡಲಾಯಿತು. ಆದರೆ ಕುರ್‌ಆನನ್ನು ಮಾತ್ರ ಅವತೀರ್ಣವಾದ ಕೂಡಲೇ ಬರೆದು ಕ್ರೋಡೀಕರಿಸಲಾಗಿತ್ತು. ಅದು ಅವತೀರ್ಣವಾದಂತೆಲ್ಲಾ ಬರೆದು ಕ್ರೋಡೀಕರಿಸುವ ಕಾರ್ಯವೂ ಮುಂದುವರಿಯಿತು.

ಪ್ರವಾದಿವರ್ಯರು(ಸ) ಈ ಕಾರ್ಯದ ಮೇಲ್ನೋಟ ವಹಿಸುತ್ತಿದ್ದರು ಮತ್ತು ಈ ಬಗ್ಗೆ ವಿಶೇಷ ಗಮನ ನೀಡುತ್ತಿದ್ದರು. ಪ್ರವಾದಿವರ್ಯರ(ಸ) ನಿಧನದ ಬಳಿಕವೇ ಪ್ರಥಮ

ಖಲೀಫ ಹ. ಅಬೂಬಕರ್ ಪೂರ್ಣ ಕುರ್‌ಆನನ್ನು ಪ್ರವಾದಿವರ್ಯರು(ಸ) ತೋರಿಸಿಕೊಟ್ಟ ಕ್ರಮದಂತೆ ಒಂದೇ ಸಂಪುಟದಲ್ಲಿ ಕ್ರೋಢೀಕರಿಸಿದರು. ಈ ಕಾರ್ಯವನ್ನವರು ಕುರ್‌ಆನಿನ ರಕ್ಷಣೆಯ ಉದ್ದೇಶವನ್ನು ಮುಂದಿರಿಸಿಯೇ ಕೈಗೊಂಡರು. ಕುರ್‌ಆನ್ ಅವತೀರ್ಣವಾಗುತ್ತಿದ್ದಂತೆ ಸಹಾಬಿಗಳು ಅದನ್ನು ಚರ್ಮ ಹಾಗೂ ಎಲೆಗಳಲ್ಲಿ ಬರೆದಿಡುತ್ತಿದ್ದರು ಮತ್ತು ಪ್ರವಾದಿವರ್ಯರಿಗೆ(ಸ) ಓದಿ ಕೇಳಿಸುತ್ತಿದ್ದರು. ಈ ರೀತಿ ಕುರ್‌ಆನನ್ನು ಸರಿಯಾಗಿ ಬರೆದಿಡುವ ಬಗ್ಗೆ ಬಹಳ ಕಾಳಜಿ ವಹಿಸಲಾಗಿತ್ತು.

ಈ ಗ್ರಂಥ ಅವತೀರ್ಣವಾಗುತ್ತಿದ್ದಂತೆಲ್ಲಾ ಅದನ್ನು ಸರಿಯಾಗಿ ಬರೆದಿಡುವ ವ್ಯವಸ್ಥೆಯೂ ಆಗುತ್ತಿತ್ತು. ಇಷ್ಟೊಂದು ಮಹತ್ವದೊಂದಿಗೆ ಹಾಗೂ ಇಷ್ಟೊಂದು ಜಾಗರೂಕತೆಯಿಂದ ಬರೆಯಲಾದ ಗ್ರಂಥ ಕೇವಲ ಪವಿತ್ರ ಕುರ್‌ಆನ್ ಆಗಿದೆ.

# ಯಾರಿಂದಲೂ ಬಚ್ಚಿಡದ ಗ್ರಂಥ

ಪವಿತ್ರ ಕುರ್‌ಆನಿನ ಎಲ್ಲ ಸೂಕ್ತಗಳೂ ಅಲ್ಲಾಹನ ವತಿಯಿಂದ ಅವತೀರ್ಣ ವಾದವುಗಳು.

ದೇವ ಕೀರ್ತನೆಯಲ್ಲಿ ಮನುಷ್ಯರು ರಚಿಸಿದ ಕಾವ್ಯಗಳು ವೇದಗಳಲ್ಲಿ ಸೇರಿವೆ.

ತೌರಾತ್‌ನಲ್ಲಿ ಬನೀ ಇಸ್ರಾಈಲರ ಚರಿತ್ರೆ ಮತ್ತು ಪ್ರವಾದಿಗಳ ಉಪದೇಶಗಳನ್ನೂ ಸೇರಿಸಲಾಗಿದೆ.

ಇಂಜೀಲ್‌ನಲ್ಲಿ ಇತಿಹಾಸವೂ ಇದೆ, ಪ್ರವಾದಿ ಮತ್ತಿತರ ಮಹಾತ್ಮರ ಉಪದೇಶಗಳೂ ಇವೆ.

ಆದರೆ ಕುರ್‌ಆನಿನಲ್ಲಿ ಎಲ್ಲ ಸೂಕ್ತಗಳೂ ಅಲ್ಲಾಹನ ವತಿಯಿಂದಲೇ ಆಗಿವೆ. ಮನುಷ್ಯರ ಸುಧಾರಣೆಗಾಗಿ, ಮನುಷ್ಯರನ್ನು ಎಚ್ಚರಗೊಳಿಸಲಿಕ್ಕಾಗಿ ಮತ್ತು ಮನುಷ್ಯರ ಉಪದೇಶಕ್ಕಾಗಿ ಅದರಲ್ಲಿ ಚಾರಿತ್ರಿಕ ಘಟನೆಗಳೂ ಇವೆ. ಶರೀರ ಮತ್ತು ಪ್ರಪಂಚದ ಕಡೆಗೆ ಸಂಕೇತಗಳೂ ಇವೆ ಹಾಗೂ ಯುಕ್ತಿ ಯುಕ್ತವಾದ ಉಪದೇಶಗಳೂ ಇವೆ. ಆದರೆ ಅವೆಲ್ಲವೂ ದೇವನಿಂದಲೇ ಅವತೀರ್ಣವಾದವುಗಳು. ಪ್ರವಾದಿವರ್ಯರ(ಸ) ಕಡೆಯಿಂದ ಅಥವಾ ಇತರ ಯಾರಿಂದಲೇ ಆಗಲಿ ಅದರಲ್ಲಿ ಏನೂ ಸೇರಿಸಲಾಗಿಲ್ಲ.

ಪ್ರವಾದಿವರ್ಯರ(ಸ) ಸ್ವಂತ ನಡೆ-ನುಡಿಗಳು ಮತ್ತು ಉಪದೇಶ ಆದೇಶಗಳನ್ನು ಪ್ರತ್ಯೇಕವಾಗಿ ಕ್ರೋಢೀಕರಿಸಲಾಗಿದೆ. ಇವುಗಳಲ್ಲಿ ಯಾವುದನ್ನೂ ಕುರ್‌ಆನಿನಲ್ಲಿ ಸೇರಿಸ ಲಾಗಿಲ್ಲ. ಈ ರೀತಿ ಯಾವ ಕಲಬೆರಕೆಯೂ ಇಲ್ಲದ ದೇವವಾಣಿಯ ಸಮಾಹಾರವೇ ಪವಿತ್ರ ಕುರ್‌ಆನ್ ಆಗಿದೆ.

ಇತರ ಧರ್ಮಗಳ ಗ್ರಂಥಗಳು ಕೆಲವು ವಿಶೇಷ ವರ್ಗಗಳ ಪಠನಕ್ಕೆ ಮಾತ್ರ ವಾಗಿರುತ್ತದೆ. ಉದಾ: ಬ್ರಾಹ್ಮಣರು, ಆಚಾರ್ಯರು, ಭಿಕ್ಷುಗಳು ವಗೈರೆ.

ವೇದದ ಒಂದರ್ಥ ಬಚ್ಚಿಡುವ ವಸ್ತು ಎಂದಾಗಿದೆ. ಅಂದರೆ ಅದನ್ನು ಜನ ಸಾಮಾನ್ಯರ ದೃಷ್ಟಿಯಿಂದ ಅಡಗಿಸಿಡಬೇಕು. ದೇವವಾಣಿಯು ದೇವನ ಎಲ್ಲ ದಾಸರಿಗೂ ಇರಬೇಕು. ಯಾವುದೇ ತಾರತಮ್ಯವಿಲ್ಲದೆ ಎಲ್ಲ ಪ್ರಮುಖರಿಗೂ ಪಾಮರರಿಗೂ ಆಗಿರ ಬೇಕು. ಎಲ್ಲರಿಗೆ ಓದಲಿಕ್ಕೂ ಕಂಠಪಾಠಗೊಳಿಸಲಿಕ್ಕೂ ಆಗಿರಬೇಕು. ಈ ಮಾರ್ಗದರ್ಶನವನ್ನು ಕೇವಲ ಕುರ್‌ಆನ್ ನೀಡುತ್ತದೆ. ಪೂರ್ಣ ಕುರ್‌ಆನನ್ನು ಕಂಠಸ್ಥಗೊಳಿಸಿದವರು ನೂರಾರಲ್ಲ,

ಸಹಸ್ರಾರು ಸಂಖ್ಯೆಯಲ್ಲಿ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಕಾಣ ಸಿಗುತ್ತಾರೆ. ಈ ವೈಶಿಷ್ಟ್ಯವೂ ಕೇವಲ ಈ ಗ್ರಂಥಕ್ಕೆ(ಕುರ್‌ಆನ್) ಮಾತ್ರ ಪ್ರಾಪ್ತವಿದೆ.

ಕೆಲವರನ್ನು ವೇದ ಓದಿದ ಅಥವಾ ಕೇಳಿದ ಕಾರಣ ಶಿಕ್ಷಾರ್ಹರೆಂದು ಪರಿಗಣಿಸ ಲಾಯಿತು ಮತ್ತು ಶಿಕ್ಷೆಯನ್ನೂ ಜಾರಿಗೊಳಿಸಲಾಗಿತ್ತು ಎಂದು ಇತಿಹಾಸದಿಂದ ತಿಳಿದು ಬರುತ್ತದೆ.

ಇದಕ್ಕೆ ವಿರುದ್ಧವಾಗಿ ಕುರ್‌ಆನಿನ ವೈಶಿಷ್ಟ್ಯವೇನೆಂದರೆ, ಅದು ಈ ವಚನಗಳು ದೇವನ ವತಿಯಿಂದಾಗಿವೆ. ಇವುಗಳನ್ನು ಆಲಿಸುವುದು ಎಲ್ಲರಿಗೂ ಅಗತ್ಯವೂ ಪುಣ್ಯ ದಾಯಕವೂ ಆಗಿದೆ ಎಂದು ಸಾರುತ್ತದೆ.

ತಿರುಕೋತಿಯೋ ಮಂದಿರದ ಬಳಿ ವೇದ ಓದಿದ ಅಪರಾಧಕ್ಕಾಗಿ ರಾಮಾನುಜರನ್ನು ಹಿಂಸೆಗೆ ಗುರಿಪಡಿಸಲಾಯಿತೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ಇತರರಿಗೂ ಮಾರ್ಗದರ್ಶನದ ಸೌಭಾಗ್ಯ ಲಭಿಸುವಂತಾಗಲು ಅವರಿಗೆ ಅಲ್ಲಾಹನ ವಾಣಿಯನ್ನು ಆಲಿಸುವ ಸಂದರ್ಭ ಒದಗಿಸಿ ಕೊಡಬೇಕೆಂಬುದೇ ಕುರ್‌ಆನಿನ ಶಿಕ್ಷಣ.

ವೇದ ವ್ಯಾಖ್ಯಾನವನ್ನು ವಿವರಿಸುತ್ತಿದ್ದ ಆದಿಶಂಕರನ ತಾಯಿ ತೀರಿಕೊಂಡಾಗ ಆತನಿಗೆ ಸಾಮಾಜಿಕ ಬಹಿಷ್ಕಾರ ಹಾಕಲಾಯಿತು. ಇನ್ನೊಂದೆಡೆ ಕುರ್‌ಆನನ್ನು ಉಚ್ಚ ಸ್ವರದಲ್ಲಿ ಓದುತ್ತಿದ್ದ ಹ. ಅಲಿಯವರನ್ನು "ಬಾಬುಲ್ ಇಲ್ಮ್" (ವಿದ್ಯೆಯ ಬಾಗಿಲು) ಎಂಬ ಬಿರುದು ನೀಡಿ ಗೌರವಿಸಲಾಯಿತು. ಅಲ್ಲಾಹನ ಗ್ರಂಥವು ಅವನ ದಾಸರಿಗಾಗಿದೆ. ಮನುಷ್ಯರು ಅದನ್ನು ಓದಬೇಕು. ಈ ಗ್ರಂಥದ ಶಿಕ್ಷಣಕ್ಕೆ ಇಷ್ಟು ಮಹತ್ವ ನೀಡಿರುವುದು ಇಸ್ಲಾಮ್ ಮಾತ್ರ.

ಈ ಶಿಕ್ಷಣ ಮತ್ತು ಮಹತ್ವದ ಪರಿಣಾಮವಾಗಿ ಕುರ್‌ಆನ್ ನಾಶ ಹೊಂದದೆ ಉಳಿಯಿತು. ಇದು ಮೊರೊಕ್ಕೋದಿಂದ ಇರಾಕಿನ ತನಕ 10 ಕೋಟಿ ಜನರು ಮಾತನಾಡುವ ಭಾಷೆ. ಅದುವೇ ಕುರ್‌ಆನಿನ ಭಾಷೆಯಾದ ಅರಬಿ ಆಗಿದೆ.

ಕುರ್‌ಆನ್ ಮಾನವ ಲೋಕಕ್ಕೆ ಜೀವನದ ಸಂದೇಶವಾಗಿರುವುದರ ಜೊತೆಗೇ ಅರಬೀ ಭಾಷೆಯನ್ನೂ ಅಜರಾಮರಗೊಳಿಸಿತು.

ಕೆಲವು ಧಾರ್ಮಿಕ ಗ್ರಂಥಗಳು ಮನುಷ್ಯ ಜೀವನದ ಬಗ್ಗೆ ಅನಗತ್ಯ ವಿವರಣೆಗಳನ್ನು ನೀಡುತ್ತವೆ. ಇದು ಹಲವು ತರದ ಕ್ಲಿಷ್ಟತೆ ಮತ್ತು ಗೊಂದಲಗಳಿಗೆ ಕಾರಣವಾಗುತ್ತದೆ. ಇನ್ನು ಕೆಲವು ವಿಧದ ಧಾರ್ಮಿಕ ಗ್ರಂಥಗಳು ಮನುಷ್ಯ ಮತ್ತು ಆತನ ಸಮಸ್ಯೆಗಳ ಬಗ್ಗೆ ಏನನ್ನೂ ಹೇಳದೆ ಕೇವಲ ತತ್ವಶಾಸ್ತ್ರಗಳನ್ನು ವಿವರಿಸುತ್ತವೆ. ಮೊದಲನೇ ವಿಧದ ಗ್ರಂಥಗಳು ಮನುಷ್ಯನನ್ನು ಅನಗತ್ಯ ಸಂಕೋಲೆಗಳಲ್ಲಿ ಬಿಗಿಯುತ್ತವೆ ಮತ್ತು ಎರಡನೇ ವಿಧದ ಗ್ರಂಥಗಳು ಅವನನ್ನು ನಿರಂಕುಶನನ್ನಾಗಿ ಮಾರ್ಪಡಿಸುತ್ತವೆ. ಇದಕ್ಕೆ ವ್ಯತಿರಿಕ್ತವಾಗಿ ಪವಿತ್ರ ಕುರ್‌ಆನಿಗೆ ತನ್ನದೇ ಆದ ಒಂದು ವೈಶಿಷ್ಟ್ಯವಿದೆ. ಒಂದೆಡೆ ಈ ಗ್ರಂಥ ಮೂಲಭೂತ ವಿಶ್ವಾಸ ಮತ್ತು ಸಿದ್ಧಾಂತಗಳ ಶಿಕ್ಷಣ ನೀಡುತ್ತದೆ. ಇನ್ನೊಂದೆಡೆ ಕಾನೂನು ಕಟ್ಟಳೆ ಮತ್ತು ಮಾನವ ಜೀವನಕ್ಕೆ ದೇವ ನಿರ್ಧರಿತ ಮೇರೆಗಳನ್ನು ವಿವರಿಸುತ್ತದೆ.

ಅವುಗಳನ್ನು ಉಲ್ಲಂಘಿಸುವ ಅನುಮತಿ ಅದು ಯಾರಿಗೂ ನೀಡುವುದಿಲ್ಲ. ವಿಶ್ವಾಸ, ಸಿದ್ಧಾಂತ ಮತ್ತು ಮೇರೆಗಳ ನಿರ್ಣಯದ ಬಳಿಕ ಕುರ್‌ಆನಿನ ಅಧೀನದಲ್ಲಿದ್ದುಕೊಂಡು ತನ್ನ ಕೆಲಸ ಮಾಡುವ ಸ್ವಾತಂತ್ರ್ಯವನ್ನು ಅದು ಮಾನವ ಚಿಂತನೆಗೆ ಮತ್ತು ಕರ್ಮ ಯೋಗ್ಯತೆಗೆ ನೀಡುತ್ತದೆ. ಹೀಗೆ ಮೂಲಭೂತ ತತ್ವಗಳ ಪಾಲನೆಯೊಂದಿಗೆ ಮೂಲಭೂತ ವಲ್ಲದ ಇತರ ವಿಷಯಗಳಲ್ಲಿ ಸ್ವಾತಂತ್ರ್ಯ ನೀಡುವ ಏಕೈಕ ಗ್ರಂಥ ಪವಿತ್ರ ಕುರ್‌ಆನ್ ಆಗಿದೆ.

"ಪ್ರವಾದಿವರ್ಯರಿಗಿಂತ(ಸ) ಅಧಿಕವಾಗಿ ವ್ಯವಹಾರಗಳಲ್ಲಿ ಸಮಾಲೋಚಿಸುವವರನ್ನು ನಾವು ಕಂಡಿಲ್ಲ" ಎಂದು ಪ್ರವಾದಿವರ್ಯರ(ಸ) ಸಂಗಾತಿಗಳು ಅವರನ್ನು ವರ್ಣಿಸಿರುವರು. ಈ ಪ್ರತ್ಯೇಕ ಗುಣವು ಪ್ರವಾದಿವರ್ಯರಿಗೆ(ಸ) ಕುರ್‌ಆನಿನಿಂದಲೇ ಪ್ರಾಪ್ತವಾಯಿತು.

ಸಾಮಾನ್ಯವಾಗಿ ಧಾರ್ಮಿಕ ಗ್ರಂಥಗಳು ಅಧಿಕಾರಿಗಳ, ಜಾಗೀರ್ದಾರರ ಮತ್ತು ಶಕ್ತಿವಂತರ ಕೈ ಬಲಪಡಿಸುವುದನ್ನೂ ಬಲಹೀನರ ಮೇಲೆ ಅಕ್ರಮವೆಸಗುವುದರಲ್ಲಿ ನೆರವಾಗುವುದನ್ನೂ ನಾವು ಕಾಣುತ್ತೇವೆ. ಆದರೆ ಕುರ್‌ಆನ್ ಮಾತ್ರ ಬಲಹೀನರಿಗೆ ನೆರವಾಗಿ ಅಕ್ರಮಿಗಳನ್ನು ಕಟುವಾಗಿ ಟೀಕಿಸುತ್ತದೆ. ಯಾವುದೇ ಅತಿಶಯೋಕ್ತಿಯಿಲ್ಲದೆ ಪವಿತ್ರ ಕುರ್‌ಆನನ್ನು ಮಾನವೀಯ ಸ್ವಾತಂತ್ರ್ಯದ ಘೋಷಣಾ ಪತ್ರ ಮತ್ತು ಮ್ಯಾಗ್ನಾಕಾರ್ಟ (MAGNACHARTA) ಎನ್ನಬಹುದು.*

*ವೇದ ಗ್ರಂಥಗಳ ಅಧ್ಯಯನದ ಬಳಿಕ ಕುರ್‌ಆನಿನ ಅಧ್ಯಯನ ನಡೆಸಿದ ಓರ್ವ ಮುಸ್ಲಿಮೇತರ ಚಿಂತಕನ ವಿಚಾರಗಳಿವು ಎಂಬುದು ಗಮನಾರ್ಹ-ಅನು.

# ಮಾನವ ಜನಾಂಗದ ಮ್ಯಾಗ್ನಾಕಾರ್ಟಾ

ಸಾಮಾನ್ಯವಾಗಿ ಧಾರ್ಮಿಕ ಗ್ರಂಥಗಳು ಮನುಷ್ಯರನ್ನು ದೇವ ಸಾನಿಧ್ಯಕ್ಕೆ ತರುತ್ತವೆಂದು ವಾದಿಸುತ್ತವೆ. ಆದರೆ ಕಾರ್ಯರೂಪದಲ್ಲಿ ಅವು ಮನುಷ್ಯರನ್ನು ರಾಜರ, ಜಾಗೀರ್ದಾರರ ಮತ್ತು ಪೂಜಾರಿಗಳ ಮುಂದೆ ಶಿರ ಬಾಗಿಸುತ್ತವೆ ಹಾಗೂ ಜನತೆಯ ಕೈಗಳನ್ನು ಸಂಕೋಲೆ ಗಳಲ್ಲಿ ಬಿಗಿದು ಅವರನ್ನು ಪರಾಧೀನಗೊಳಿಸುವ ಕಾರ್ಯವನ್ನು ಈ ಗ್ರಂಥಗಳೇ ನಿರ್ವಹಿಸುತ್ತವೆ.

ರಾಜರನ್ನು ದೇವನ ಅವತಾರವೆಂದೂ ಪ್ರತಿನಿಧಿಯೆಂದೂ ನೆರಳೆಂದೂ ವರ್ಣಿಸ ಲಾಯಿತು. ಕೆಲವು ಗ್ರಂಥಗಳಲ್ಲಿ ಕಾಗದದ ಪುಟಗಳ ಮಟ್ಟಿಗೆ ಮನುಷ್ಯನ ಸ್ವಾತಂತ್ರ್ಯದ ಕುರಿತು ಪ್ರಸ್ತಾಪಿಸಲಾಗಿದೆ. ಆದರೆ ಕ್ರಿಯಾರೂಪದಲ್ಲಿ ಮನುಷ್ಯರನ್ನು ಮನುಷ್ಯರ ದಾಸ್ಯ ದಿಂದ ಮುಕ್ತಗೊಳಿಸುವುದರಲ್ಲಿ ಅವು ವಿಫಲಗೊಂಡಿವೆ. ಇನ್ನೊಂದೆಡೆ ಪವಿತ್ರ ಕುರ್‌ಆನ್ ಮನುಷ್ಯರು ಮನುಷ್ಯರ ದಾಸ್ಯ ಮಾಡಕೂಡದೆಂದೂ ಮನುಷ್ಯರು ಮನುಷ್ಯರನ್ನು ಪೂಜಿಸಬಾರದೆಂದೂ ಮನುಷ್ಯರು ಮನುಷ್ಯರನ್ನು ಅನುಸರಿಸಬಾರದೆಂದೂ ಮನುಷ್ಯನು ಇತರ ಮನುಷ್ಯರ ಮುಂದೆ ಕೈಚಾಚ ಕೂಡದೆಂದೂ ಘಂಟಾಘೋಷವಾಗಿ ಸಾರುತ್ತದೆ. ಈ ವಿಚಾರ ಅದರ ವಿಶ್ವಾಸಿಗರ ನರನಾಡಿಗಳಲ್ಲಿ ರಕ್ತದಂತೆ ಸಂಚರಿಸುವಷ್ಟು ಕುರ್‌ಆನ್ ಈ ಶಿಕ್ಷಣಕ್ಕೆ ಮಹತ್ವ ನೀಡಿ ವಿವರಿಸಿದೆ. ಈ ರೀತಿ ಕುರ್‌ಆನ್ ಪೂಜೆ, ದಾಸ್ಯ, ಅನುಸರಣೆ, ಸಹಾಯ ಯಾಚನೆಗಳಿಗೆ ಅರ್ಹನು ಕೇವಲ ಅಲ್ಲಾಹನೇ ಎಂದು ಸಾರಿ ಹೇಳಿದೆ.

ಈ ಶಿಕ್ಷಣಗಳನ್ನು ಅಂಗೀಕರಿಸುವುದರಿಂದ ಏನಾಗುತ್ತದೆ ಮತ್ತು ಏನಾಗಿದೆ? ಮನುಷ್ಯರ ಮೇಲೆ ಮನುಷ್ಯರ ದೇವತ್ವವನ್ನು ಕೊನೆಗೊಳಿಸಲಾಯಿತು. ಮನುಷ್ಯರ ಮೇಲೆ ಮನುಷ್ಯರು ಮಾಡುವ ಅಕ್ರಮ ಅತ್ಯಾಚಾರಗಳ ಬಾಗಿಲುಗಳನ್ನು ಮುಚ್ಚಲಾಯಿತು. ಮನುಷ್ಯನ ಚಿಂತನೆ ಮತ್ತು ಪ್ರಗತಿಯನ್ನು ತಡೆಯುವ ತೊಡಕುಗಳನ್ನು ಪುಡಿಪುಡಿ ಮಾಡಲಾಯಿತು.

ಮನುಷ್ಯನಿಗೆ ಸಂಪೂರ್ಣ ಸ್ವಾತಂತ್ರ್ಯ ಲಭ್ಯವಾಯಿತು. ಪ್ರತಿಯೊಬ್ಬ ವ್ಯಕ್ತಿಯ ಕಣ್ಣು ತೆರೆಯಿತು. ಮನುಷ್ಯ ಜೀವನದಿಂದ ಅಂಧಕಾರ ತೊಲಗಿತು ಹಾಗೂ ಬೆಳಕು ವ್ಯಾಪಿಸಿತು.

ಮನುಷ್ಯ ಚಿಂತನೆಯ ತೋಟದಲ್ಲಿ ಮುಂಜಾವಿನ ತಂಗಾಳಿ ಬೀಸತೊಡಗಿತು. ಮನುಷ್ಯನು ಆನಂದೋಲ್ಲಾಸಗಳಲ್ಲಿ ಮೈಮರೆತನು. ಮನುಷ್ಯನನ್ನು ಮನುಷ್ಯನ ದಾಸ್ಯದಿಂದ ಸಂಪೂರ್ಣವಾಗಿ ಮುಕ್ತಗೊಳಿಸಿದ ಈ ಅಪೂರ್ವ ವಿಜಯ ಗಳಿಸಿದ ಗ್ರಂಥದ ಹೆಸರೇ ಪವಿತ್ರ ಕುರ್‌ಆನ್.

ಇದಕ್ಕಿಂತ ಮಿಗಿಲಾದ ಮಾನವ ಹಕ್ಕುಗಳ ಘೋಷಣಾ ಪತ್ರವನ್ನು ಮಾನವಕುಲವು ಎಂದೂ ನೋಡಿಲ್ಲ. ಮ್ಯಾಗ್ನಾಕಾರ್ಟಕ್ಕಿಂತಲೂ ಮಿಗಿಲಾದ ಹೆಚ್ಚು ಮಹತ್ವದ ಮಾನವ ಹಕ್ಕುಗಳ ಘೋಷಣಾ ಪತ್ರವಿದ್ದರೆ ಅದು ಕುರ್‌ಆನ್ ಮಾತ್ರವಾಗಿದೆ.

ಈ ಘೋಷಣಾ ಪತ್ರವು ಗುಲಾಮರ ಕೈಗಳಿಗೆ ಬಿಗಿಯಲಾಗಿದ್ದ ಸಂಕೋಲೆಗಳನ್ನು ಮುರಿಯಿತು. ಎಲ್ಲ ಮನುಷ್ಯರನ್ನೂ ಏಕ ರೀತಿಯ ಹಕ್ಕುಗಳೊಂದಿಗೆ ಒಂದೇ ಸಾಲಿನಲ್ಲಿ ತಂದು ನಿಲ್ಲಿಸಿತು. ಮನುಷ್ಯ ಸ್ವಾತಂತ್ರ್ಯದ ಈ ಘೋಷಣಾ ಪತ್ರ. ಎಲ್ಲ ಮನುಷ್ಯರನ್ನು ಉದ್ದೇಶಿಸಿ ಈ ರೀತಿ ಹೇಳುತ್ತದೆ.

**"ಮನುಷ್ಯರೇ! ನಾವು ನಿಮ್ಮೆಲ್ಲರನ್ನೂ ಒಂದೇ ಒಂದು ಗಂಡು ಮತ್ತು ಹೆಣ್ಣಿನಿಂದ ಸೃಷ್ಟಿಸಿದೆವು. ನಿಮ್ಮನ್ನು ಜನಾಂಗಗಳಾಗಿ, ಕುಲಗಳಾಗಿ ವಿಂಗಡಿಸಿದೆವು. ನೀವು ಪರಸ್ಪರ ಪರಿಚಯ ಪಡಲಿಕ್ಕಾಗಿ." (ಪವಿತ್ರ ಕುರ್‌ಆನ್, 49:13)**

ಮಾನವ ಜನಾಂಗವು ಒಂದೇ ಕುಟುಂಬವೆಂಬುದನ್ನು ಈ ಶಿಕ್ಷಣವು ಮಾನವನಿಗೆ ತಿಳಿಸಿತು. ಕೇವಲ ಪರಸ್ಪರ ಪರಿಚಯ ಪಟ್ಟುಕೊಳ್ಳಲಿಕ್ಕಾಗಿಯಷ್ಟೇ ಜನಾಂಗ ಮತ್ತು ಕುಲಗೋತ್ರಗಳು ಅಸ್ತಿತ್ವಕ್ಕೆ ಬಂದುವು.

❖ ಹುಟ್ಟಿನ ಆಧಾರದಲ್ಲಿ ಉಚ್ಚ ನೀಚತೆ

❖ ಕುಲಗೋತ್ರದ ಆಧಾರದಲ್ಲಿ ಉಚ್ಚ ನೀಚತೆ

❖ ಮನೆತನದ ಆಧಾರದಲ್ಲಿ ಉಚ್ಚ ನೀಚತೆ.

ಈ ಎಲ್ಲ ತಾರತಮ್ಯಗಳನ್ನು ಬೇರು ಸಹಿತ ಕಿತ್ತೆಸೆಯಲಾಯಿತು.

ಎಲ್ಲ ಮನುಷ್ಯರೂ ಸ್ವತಂತ್ರರಾಗಿ ಹುಟ್ಟಿದ್ದಾರೆ ಮತ್ತು ಎಲ್ಲರೂ ಏಕ ರೀತಿಯ ಹಕ್ಕುಗಳಿಗೆ ಹಾಗೂ ಸಮಾನ ರೂಪದ ಜೀವನಕ್ಕೆ ಅರ್ಹರಾಗಿರುತ್ತಾರೆ. ಮನುಷ್ಯರನ್ನು ಇತರರ ಅಧಿಕಾರ ದಿಂದ ಮುಕ್ತಗೊಳಿಸಿ, ಸಮಾನ ಹಕ್ಕುಗಳನ್ನು ನೀಡಿ ಕುರ್‌ಆನ್ ಅವರನ್ನು ನಿರಂಕುಶರನ್ನಾಗಿ ಮಾಡಿಬಿಟ್ಟಿದೆಯೇ ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ. ಅವರನ್ನು ಸರ್ವತಂತ್ರ ಸ್ವತಂತ್ರರನ್ನಾಗಿ ಮಾಡಲಾಗಿದೆಯೇ? ಎಲ್ಲ ಹೊಣೆಗಾರಿಕೆಗಳಿಂದ ಅವರನ್ನು ಮುಕ್ತಗೊಳಿಸಲಾಗಿದೆಯೇ? ಇಲ್ಲ. ಖಂಡಿತ ಇಲ್ಲ.

ಕುರ್‌ಆನ್ ದೇವಭಯವಿರಿಸಿಕೊಳ್ಳುವ ಶಿಕ್ಷಣ ನೀಡಿತು. ಕೇವಲ ಒಬ್ಬ ದೇವನನ್ನು ಭಯಪಡಿರಿ, ಇತರ ಯಾರನ್ನೂ ಭಯಪಡಬೇಡಿರಿ ಎಂದು ಆಜ್ಞಾಪಿಸಿತು. ಈ ಶಿಕ್ಷಣವನ್ನು ನೀಡಿ ದೇವಭಯವನ್ನು ಮನುಷ್ಯ ಹೃದಯಗಳಲ್ಲಿ ರೂಢಮೂಲಗೊಳಿಸಿ ಕೇವಲ ದೈವಿಕ ಆಜ್ಞೆ ಗಳಿಗೆ ವಿಧೇಯವಾಗುವ ಮನೋಭಾವವನ್ನು ಮನುಷ್ಯನಿಗೆ ಕುರ್‌ಆನ್ ನೀಡಿತು.

ಅಕ್ರಮಿ ಅಧಿಕಾರಿಗಳು, ಶೋಷಣೆ ಮಾಡುವವರು, ಯುದ್ಧ, ರೋಗ, ಮರಣ, ಬಡತನ, ಸೊತ್ತು, ಸ್ಥಾನಮಾನಗಳ ನಾಶ ಮುಂತಾದವುಗಳಿಂದ ಭಯಪಡದೆ, ಅಳುಕದೆ, ಪರಿಭ್ರಾಂತ ನಾಗಬಾರದೆಂಬ ಶಿಕ್ಷಣ ನೀಡಿ ಪವಿತ್ರ ಕುರ್‌ಆನ್ ಮನುಷ್ಯನನ್ನು ಓರ್ವ ಪರಾಕ್ರಮಿ ಹಾಗೂ ಗೌರವಾನ್ವಿತ ವ್ಯಕ್ತಿಯಾಗಿ ಮಾರ್ಪಡಿಸಿತು. ಮನುಷ್ಯರಿಗೆ ಈ ಅಮೂಲ್ಯ ಸಂಪತ್ತನ್ನು ಪ್ರದಾನ ಮಾಡಿದ ಏಕೈಕ ಗ್ರಂಥ ಪವಿತ್ರ ಕುರ್‌ಆನ್ ಆಗಿದೆ. ಮರುಭೂಮಿಯಲ್ಲಿ ವಾಸಿಸುತ್ತಿದ್ದ ಅರಬರು ತಮ್ಮ ಕುಲಗೋತ್ರಗಳ ಹೆಸರಲ್ಲಿ ಪರಸ್ಪರ ಯುದ್ಧದಲ್ಲಿ ನಿರತರಾಗಿದ್ದರು. ಆ ಕಾಲದ ಮಾನವ ಲೋಕದ ಸಂಸ್ಕೃತಿಯ ಸೋಂಕೂ ಅವರಿಗೆ ತಾಗಿರಲಿಲ್ಲ. ಈ ಮಹಾನ್ ಗ್ರಂಥವು ಅಂಥವರಿಗೆ ಸಭ್ಯತೆ, ಸಂಸ್ಕೃತಿಗಳ ಪಾಠ ನೀಡಿ, ಲೋಕದ ಮೇಲೆ ಆಡಳಿತ ನಡೆಸುವ ಯುಕ್ತಿ ಮತ್ತು ಜ್ಞಾನವನ್ನು ದಯಪಾಲಿಸಿ, ಎಲ್ಲ ರೀತಿಯಿಂದಲೂ ಅವರನ್ನು ಅತ್ಯಂತ ಪರಾಕ್ರಮಿಗಳನ್ನಾಗಿ ಮಾರ್ಪಡಿಸಿತು.

ಈ ಮಹಾನ್ ಸಾಧನೆಯು ಕುರ್‌ಆನಿನ ಕ್ರಾಂತಿಕಾರಿ ಶಿಕ್ಷಣಗಳ ಪರಿಣಾಮವಾಗಿತ್ತೆಂಬ ವಾಸ್ತವಿಕತೆಯನ್ನು ನಾನು ಹಿಮಾಲಯದ ಶಿಖರದಲ್ಲಿ ನಿಂತು ಘೋಷಿಸಬಲ್ಲೆ.

ಎಲ್ಲ ಪರಿಸ್ಥಿತಿಯಲ್ಲೂ ನ್ಯಾಯ ಪಾಲಿಸುವಂತೆ ಕುರ್‌ಆನ್ ಹೆಜ್ಜೆ ಹೆಜ್ಜೆಗೂ ಆದೇಶ ನೀಡುತ್ತಿರುವುದು ಅದರ ಒಂದು ವೈಶಿಷ್ಟ್ಯ. ನ್ಯಾಯನಿಷ್ಠೆಯನ್ನು ಕೈಬಿಡುವವರಿಗೆ ಅದು ಪರಲೋಕ ಶಿಕ್ಷೆಯ ಬೆದರಿಕೆಯೊಡ್ಡುತ್ತದೆ. ನಿಮ್ಮ ಸಂಬಂಧಿಕರ ವಿಷಯವಾಗಿದ್ದರೂ ನ್ಯಾಯನಿಷ್ಠೆಯನ್ನು ಕೈಬಿಡಬೇಡಿರಿ ಎಂದು ಕುರ್‌ಆನ್ ತಾಕೀತು ಮಾಡಿದೆ. ನ್ಯಾಯ ಪಾಲನೆಯ ಈ ಶಿಕ್ಷಣದಿಂದಾಗಿಯೇ ಇಸ್ಲಾಮೀ ಆಡಳಿತದ ಸತ್ಯ-ನ್ಯಾಯಗಳ ಉನ್ನತ ಮಾದರಿಗಳು ಇತಿಹಾಸದ ಪುಟಗಳಲ್ಲಿ ಅಂಕಿತಗೊಂಡಿವೆ.

ಮನುಷ್ಯ ಸ್ವಾತಂತ್ರ್ಯ, ಮನುಷ್ಯ ಸಮಾನತೆ, ಸತ್ಯನ್ಯಾಯಗಳೆಂಬ ಮೂರು ಉತ್ತಮ ಬುನಾದಿಗಳಲ್ಲಿ ಕುರ್‌ಆನ್ ಮನುಷ್ಯ ಸಮಾಜವನ್ನು ನಿರ್ಮಿಸುತ್ತದೆ.

ಕುರ್‌ಆನಿನ ಇನ್ನೊಂದು ವೈಶಿಷ್ಟ್ಯವನ್ನು ಗಮನಿಸಿರಿ:

ಹೆಚ್ಚಿನ ಧಾರ್ಮಿಕ ಗ್ರಂಥಗಳು ಮಾನವನ ಇಹಲೋಕ ಜೀವನವನ್ನು ಪಾಪದ ಜೀವನವೆಂದು ಸಾರುತ್ತದೆ. ಅದರಿಂದ ಸಾಧ್ಯವಿದ್ದಷ್ಟು ಬೇಗ ಮುಕ್ತಿ ಹೊಂದುವ, ಅದನ್ನು ತ್ಯಜಿಸುವ ಉಪದೇಶ ಮಾಡುತ್ತವೆ.

ಇದಕ್ಕೆ ವ್ಯತಿರಿಕ್ತವಾಗಿ ಮನುಷ್ಯನನ್ನು ದೇವನ ಅತ್ಯುತ್ತಮ ಸೃಷ್ಟಿ ಎಂದು ಕುರ್‌ಆನ್ ಸಾರುತ್ತದೆ. ಜೀವನದಲ್ಲಿ ಮನುಷ್ಯನ ಕರ್ತವ್ಯಗಳ ಮಹತ್ವದ ಕಡೆಗೆ ಅದು ಬೆಳಕು ಬೀರುತ್ತದೆ. ಆ ಕರ್ತವ್ಯಗಳ ನಿರ್ವಹಣೆಯನ್ನು ಆದರ ಭಾವದಿಂದ ವೀಕ್ಷಿಸುತ್ತದೆ. ಜೀವನದಲ್ಲಿ ಆ ಕರ್ತವ್ಯಗಳನ್ನು ನೆರವೇರಿಸಲು ತಾಕೀತು ಮಾಡುತ್ತದೆ. ಸಮಗ್ರ ಜೀವನವು ಆ ಕರ್ತವ್ಯಗಳ ನಿರ್ವಹಣೆಯಿಂದಲೇ ಉಂಟಾಗುವುದೆಂದೂ ಹೇಳುತ್ತದೆ. ಮನುಷ್ಯ ಜೀವನವನ್ನು ಗೌರವಾದರಗಳೊಂದಿಗೆ ಕಾಣುವ ಗ್ರಂಥವು ಪವಿತ್ರ ಕುರ್‌ಆನ್ ಆಗಿದೆ.

ಅದು ಜೀವನ ವ್ಯವಹಾರಗಳಿಂದ ದೂರ ಉಳಿಯುವ ಆದೇಶ ನೀಡುವುದಿಲ್ಲ. ಜೀವನದ ಈ ಸಂಘರ್ಷದಲ್ಲೇ ಅದಕ್ಕೆ ಸಮಗ್ರತೆ ಲಭಿಸುತ್ತದೆಂದು ಸಾರುತ್ತದೆ.

❖ ಇಂತಹ ವಿಶೇಷತೆಗಳಿಂದ ಕೂಡಿದ ಈ ಗ್ರಂಥವು ಖಂಡಿತವಾಗಿಯೂ ಅಂತಿಮ ದೈವೀಕ ಗ್ರಂಥವಾಗಿದೆ.

❖ ಇಂತಹ ಅನುಗ್ರಹಗಳನ್ನು ಪ್ರದಾನ ಮಾಡುವ ಗ್ರಂಥ ಖಂಡಿತ ದಿವ್ಯ ಗ್ರಂಥವಾಗಿದೆ.

❖ ಇಂತಹ ಮಹಾನತೆಗಳನ್ನು ನೀಡುವ ಈ ಗ್ರಂಥ ನಿಜಕ್ಕೂ ಮಹಾನ್ ಗ್ರಂಥವಾಗಿದೆ.*

---

*ಎಷ್ಟೊಂದು ಉದಾತ್ತ ಭಾವನೆಗಳು! ಅದೂ ಮುಸ್ಲಿಮೇತರ ಕುಟುಂಬದಲ್ಲಿ ಹುಟ್ಟಿ, ಇಸ್ಲಾಮ್ ಮತ್ತು ಕುರ್‌ಆನಿನ ಗಾಢ ಅಧ್ಯಯನ ನಡೆಸಿದ ನಂತರ ವ್ಯಕ್ತಪಡಿಸುತ್ತಿದ್ದಾರೆ-ಅನು.

# ಪ್ರವಾದಿಗಳು ಮನುಷ್ಯರೇ ಆಗಿರುತ್ತಾರೆ

ಮನುಷ್ಯನಲ್ಲಿ ಸತ್ಯ, ಸಚ್ಚಾರಿತ್ರ್ಯ, ಲಜ್ಜೆಗಳ ಗುಣವನ್ನುಂಟು ಮಾಡಲು ಮತ್ತು ಅದರ ಶಿಕ್ಷಣ ನೀಡಲು ಪ್ರವಾದಿವರ್ಯರು ನಿಯುಕ್ತರಾಗಿದ್ದರು. ಅವರು ಅತ್ಯಂತ ಸರಳ ರೀತಿಯಲ್ಲಿ ಯುಕ್ತಿಯುಕ್ತವಾದ ಈ ಮಹಾನ್ ಶಿಕ್ಷಣವನ್ನು ಜನರಿಗೆ ನೀಡಿದರು.

ಇಂಥವರನ್ನು ದೇವನ ಅವತಾರವೆಂದೂ ದೇವಪುತ್ರರೆಂದೂ ದೇವಾಂಶ ಸಂಭೂತರೆಂದೂ ವಾದಿಸಿದ ಧರ್ಮಗಳನ್ನು ಜನರು ನಂಬಿಕೊಂಡು ಅನುಸರಿಸಿದರು.

ಆದರೆ ಇಸ್ಲಾಮ್ ಧರ್ಮದಲ್ಲಿ ಪ್ರವಾದಿ ಮುಹಮ್ಮದ್‌ರನ್ನು(ಸ) ದೇವನೆಂದೋ ದೇವಪುತ್ರನೆಂದೋ ದೇವನ ಅವತಾರವೆಂದೋ ಪರಿಗಣಿಸಲಾಗುವುದಿಲ್ಲ.

ಪ್ರವಾದಿವರ್ಯರು ಸರಳ ಸ್ವಭಾವದ ಮನುಷ್ಯರು. ಆದರೆ ಅವರೊಂದು ಪವಿತ್ರ ಹಾಗೂ ಉನ್ನತ ಚಾರಿತ್ರ್ಯದ ಮನುಷ್ಯರಾಗಿದ್ದರು.

"ಓ ಪ್ರವಾದಿಯವರೇ! ಹೇಳಿರಿ, ನಾನು ನಿಮ್ಮಂಥ ಓರ್ವ ಮನುಷ್ಯನೇ ಆಗಿರುವೆನು. ನನ್ನ ಮೇಲೆ ದೇವವಾಣಿ ಅವತೀರ್ಣಗೊಳ್ಳುತ್ತದೆ. ನಿಮ್ಮ ದೇವನಾದರೋ ಏಕಮಾತ್ರ ದೇವನು ಎಂದು ಘೋಷಿಸಿರಿ" (ಅಲ್‌ಕಹ್ಫ್: 110) ಎಂದು ಪವಿತ್ರ ಕುರ್‌ಆನ್ ಸಾರಿ ಹೇಳುತ್ತದೆ.

ಕುರ್‌ಆನಿನಲ್ಲಿ ಹಲವೆಡೆ "ನಾನು ಕೇವಲ ಮನುಷ್ಯ"ನೆಂದು ಪ್ರವಾದಿವರ್ಯರ ಮೂಲಕ ಘೋಷಣೆ ಮಾಡಿಸಲಾಗಿದೆ.

- ❖ ನಾನು ಯಾವುದೇ ವಿಚಿತ್ರ ಸೃಷ್ಟಿಯಲ್ಲ
- ❖ ನನ್ನ ಬಳಿ ಆಕಾಶಗಳ ಖಜಾನೆಗಳಿಲ್ಲ
- ❖ ನನಗೆ ಅದೃಶ್ಯದ ಜ್ಞಾನವಿಲ್ಲ
- ❖ ನಾನು ಮನುಷ್ಯ ಮಾತ್ರನು, ನಿಮ್ಮಂಥ ಮನುಷ್ಯ.

ಈ ಘೋಷಣೆಗಳೊಂದಿಗೆ ಯಾವನಾದರೂ ಯಾವುದಾದರೂ ಧರ್ಮವನ್ನು ಸಂಸ್ಥಾಪಿಸಿದ್ದರೆ ಅದು ಕೇವಲ ಪ್ರವಾದಿವರ್ಯರು ಮಾತ್ರ.

ಕುರ್‌ಆನ್ ಸ್ಪಷ್ಟ ಮಾತುಗಳಲ್ಲಿ ಘೋಷಿಸುತ್ತದೆ:

"ನೀವು ಮರಣ ಹೊಂದಿದವರಿಗೆ ಕೇಳಿಸಲಾರಿರಿ. ಬೆನ್ನು ತಿರುಗಿಸಿ ಓಡುತ್ತಿರುವ ಕಿವುಡರಿಗೂ ನೀವು ಕೇಳಿಸಲಾರಿರಿ. ಅಂಧರಿಗೆ ದಾರಿ ತೋರಿಸಿ ಮಾರ್ಗಭ್ರಷ್ಟತೆಯಿಂದ

ರಕ್ಷಿಸುವುದೂ ನಿಮ್ಮಿಂದ ಸಾಧ್ಯವಲ್ಲ. ನಮ್ಮ ವಚನಗಳ ಮೇಲೆ ವಿಶ್ವಾಸವಿಡುವ ಮತ್ತು ಅನುಸರಣೆಯನ್ನು ಕೈಗೊಳ್ಳುವವರಿಗೆ ಮಾತ್ರ ನೀವು ನಿಮ್ಮ ಮಾತುಗಳನ್ನು ಕೇಳಿಸಬಲ್ಲಿರಿ."

(ಪವಿತ್ರ ಕುರ್‌ಆನ್, 27:80-81)

ಆದುದರಿಂದ ಪ್ರವಾದಿವರ್ಯರು ಪವಾಡ ಪ್ರದರ್ಶನದ ಪ್ರಯತ್ನ ಮಾಡಿರಲಿಲ್ಲ. ದೇವಾಂಶ ಸಂಭೂತನೆಂದು ವಾದಿಸಲೂ ಇಲ್ಲವೆಂಬ ಮಾತು ಸ್ಪಷ್ಟವಾಗುತ್ತದೆ. ಅವರು ಸನ್ಮಾರ್ಗವನ್ನು ತೋರಿಸಿಕೊಡಲು ನಿಯುಕ್ತರಾದ ಓರ್ವ ಮನುಷ್ಯರೇ ಆಗಿದ್ದರು.

ಇಷ್ಟು ಮಾತ್ರವಲ್ಲ, ಈ ಸನ್ಮಾರ್ಗದಿಂದ ಪ್ರವಾದಿವರ್ಯರು ತಪ್ಪಿನಡೆದರೂ ಅವರನ್ನು ಅಲ್ಲಾಹನ ಕ್ರೋಧದಿಂದ ಯಾವ ಶಕ್ತಿಯೂ ರಕ್ಷಿಸಲಾರದೆಂದು ಕುರ್‌ಆನ್ ಸಾರುತ್ತದೆ.

"ನಿಮ್ಮ ಬಳಿ ಬಂದಿರುವ ಈ ಶಿಕ್ಷಣದ ಬಳಿಕವೂ ನೀವು ಅವರ (ಸತ್ಯನಿಷೇಧಿಗಳ) ದೇಹೇಚ್ಛೆಗಳನ್ನು ಅನುಸರಿಸಿದರೆ ಅಲ್ಲಾಹನ ಹಿಡಿತದಿಂದ ನಿಮ್ಮನ್ನು ರಕ್ಷಿಸಬಲ್ಲ ಮಿತ್ರ ನಾಗಲಿ, ಸಹಾಯಕನಾಗಲಿ ನಿಮಗೆ ಸಿಗಲಾರರು". (ಪವಿತ್ರ ಕುರ್‌ಆನ್ 2:120)

ಈ ಸೂಕ್ತಗಳನ್ನು ಓದುವಾಗ ನಮ್ಮ ಹೃದಯ ಕಂಪಿಸುತ್ತದೆ. ಮನುಷ್ಯರಿಗೆ ಅತ್ಯುನ್ನತ ಮಾದರಿಯೆಂದು ನಿರ್ಣಯಿಸಲ್ಪಟ್ಟವರು ದೇವನನ್ನು ಬಿಟ್ಟು ತನ್ನ ದೇಹೇಚ್ಛೆ ಗಳನ್ನು ಅನುಸರಿಸಿ ದೇವ ಶಿಕ್ಷೆಗೆ ಪಾತ್ರರಾಗಿಯಾರೇ? ಇಲ್ಲ. ಖಂಡಿತ ಇಲ್ಲ. ಆದರೂ ಪ್ರವಾದಿವರ್ಯರಿಂದಲೂ(ಸ) ತಪ್ಪು ಸಂಭವಿಸಿದರೆ ಅವರನ್ನು ದೇವನ ಹಿಡಿತದಿಂದ ರಕ್ಷಿಸಬಲ್ಲ ಮಿತ್ರ ಮತ್ತು ಸಹಾಯಕ ದೊರಕಲಾರ ಎಂದು ಕುರ್‌ಆನ್ ಸ್ಪಷ್ಟ ಶಬ್ದಗಳಲ್ಲಿ ಎಚ್ಚರಿಸುತ್ತದೆ.

ಯಾವುದಾದರೂ ಧಾರ್ಮಿಕ ಗ್ರಂಥದಲ್ಲಿ ಅದರ ವಾಹಕರನ್ನು ಇಷ್ಟು ನೇರ ಹಾಗೂ ಸ್ಪಷ್ಟವಾಗಿ ಎಚ್ಚರಿಸಲಾಗಿದೆಯೇ? ಖಂಡಿತ ಇಲ್ಲ.

"ನಾನೂ ನಿಮ್ಮಂಥ ಓರ್ವ ಮನುಷ್ಯನೇ. ನಾನೂ ತಪ್ಪು ಮಾಡಿದರೆ ಅಲ್ಲಾಹನ ಬಳಿ ನನ್ನನ್ನು ಹಿಡಿಯಲಾಗುವುದು" ಎಂಬ ಘೋಷಣೆಯೊಂದಿಗೆ ಯಾವುದಾದರೂ ಧರ್ಮವನ್ನು ಸಮರ್ಪಿಸಿದವರು ಯಾರಾದರೂ ಇದ್ದರೆ ಅದು ಪ್ರವಾದಿವರ್ಯರು ಮಾತ್ರ. ಇಂತಹ ಪ್ರವಾದಿಯನ್ನು ಜಗತ್ತಿಗೆ ನೀಡಿರುವುದು ಇಸ್ಲಾಮ್ ಧರ್ಮ ಮಾತ್ರ.

ಇನ್ನು ಇತರ ಧರ್ಮಗಳ ಇತಿಹಾಸದಲ್ಲಿ ಎಲ್ಲೂ ಸಿಗದಂತಹ ಒಂದು ಆಶ್ಚರ್ಯಕರ ವಿಷಯವೂ ಇಲ್ಲಿದೆ. ಪ್ರವಾದಿ ಮುಹಮ್ಮದ್‌ರನ್ನು(ಸ) ಅವರ ಜೀವನ ಕಾಲದಲ್ಲಿಯೂ ಮನುಷ್ಯನೆಂದೇ ಪರಿಗಣಿಸಲಾಗುತ್ತಿತ್ತು. ಅವರ ನಿಧನಾನಂತರ ಇಂದಿನ ತನಕವೂ ಮನುಷ್ಯನೆಂದೇ ಪರಿಗಣಿಸಲಾಗುತ್ತಿದೆ ಮತ್ತು ಪ್ರಳಯಕಾಲದ ತನಕ ಹಾಗೆಯೇ ಪರಿಗಣಿಸಲಾಗುವುದು.

ಎಷ್ಟೋ ಧಾರ್ಮಿಕ ನಾಯಕರು ಮನುಷ್ಯರಾಗಿ ಹುಟ್ಟಿ, ಜೀವನದಾದ್ಯಂತ ಮನುಷ್ಯನ ನೆಲೆಯಲ್ಲೇ ಇದ್ದು, ಮನುಷ್ಯ ಸಮಾಜದಲ್ಲಿ ಸುಧಾರಣೆ ಮತ್ತು ಒಳಿತಿನ ಕಾರ್ಯ

ನಿರ್ವಹಿಸಿದರು. ಆದರೆ ಅವರು ತೀರಿಕೊಂಡೊಡನೆಯೇ ಅವರನ್ನು ದೇವನ ಸ್ಥಾನಕ್ಕೇರಿಸ ಲಾಯಿತು.

ಉದಾಹರಣೆಗೆ, ಗೌತಮ ಬುದ್ಧರನ್ನೇ ತೆಗೆದುಕೊಳ್ಳಿ. ಅವರು ಮನುಷ್ಯರಾಗಿಯೇ ಹುಟ್ಟಿದರು. ಅವರು ಸತ್ಕರ್ಮಗಳನ್ನೆಸಗುತ್ತಿದ್ದರು ಮತ್ತು ಒಳಿತನ್ನು ಆಜ್ಞಾಪಿಸುತ್ತಿದ್ದ ರೆಂಬುದು ನಿರ್ವಿವಾದ. ಅವರು ಮರಣ ಹೊಂದುತ್ತಲೇ ಅವರನ್ನು ದೇವನೆಂದು ಪರಿಗಣಿಸಲಾಯಿತು. ಆದರೆ ಇಸ್ಲಾಮ್ ಧರ್ಮದಲ್ಲಿ ಎಂದೂ ಪ್ರವಾದಿವರ್ಯರಿಗೆ(ಸ) ದೇವನ ಸ್ಥಾನ ನೀಡಲಾಗಿಲ್ಲ. ಅವರು ಮನುಷ್ಯ ಮಾತ್ರರು. ಅತ್ಯುತ್ಕೃಷ್ಟ ಚಾರಿತ್ರ್ಯದ ಮನುಷ್ಯ. ಪ್ರವಾದಿ ಎಂಬ ನೆಲೆಯಲ್ಲಿ ಸಂಪೂರ್ಣ ಮಾನವ ಜನಾಂಗಕ್ಕೇ ಅತ್ಯುತ್ತಮ ಮಾದರಿ.

ಕಳೆದ 1400 ವರ್ಷಗಳಿಂದ ಅವರನ್ನು ಈ ತೆರನಾಗಿಯೇ ವರ್ಣಿಸಲಾಗಿದೆ. ದೇವನ ಸ್ಥಾನವನ್ನು ಎಂದೂ ಅವರಿಗೆ ನೀಡಲಾಗಿಲ್ಲ.

# ಇಸ್ಲಾಮ್: ಅಣ್ಣಾದೊರೈ* ದೃಷ್ಟಿಯಲ್ಲಿ

ತಮಿಳ್ನಾಡಿನ ಮಾಜಿ ಮುಖ್ಯಮಂತ್ರಿ ಶ್ರೀ ಅಣ್ಣಾದೊರೈಯವರು 1957ರ ಅಕ್ಟೋಬರ್ 7 ರಂದು ಪ್ರವಾದಿ ಜೀವನ ಚರಿತ್ರೆಯ ಕುರಿತು ಒಂದು ಭಾಷಣ ಮಾಡಿದ್ದರು. ಅದನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ. ತನ್ನ ಭಾಷಣದಲ್ಲಿ ಅಣ್ಣಾದೊರೈಯವರು ಈ ರೀತಿ ಹೇಳಿದ್ದರು:

ಇಸ್ಲಾಮ್ ಧರ್ಮದ ತತ್ವಗಳು ಮತ್ತು ವಿಶ್ವಾಸಗಳ ಅಗತ್ಯ 6ನೇ ಶತಮಾನ ದಲ್ಲಿದ್ದಂತೆಯೇ ಇಂದಿನ ಜಗತ್ತಿಗೂ ಇದೆ. ಇಂದು ಜಗತ್ತು ಅನೇಕ ಸಿದ್ಧಾಂತಗಳ ಹುಡುಕಾಟದಲ್ಲಿ ಎಡವಿ ಬೀಳುತ್ತಿದೆ. ಎಲ್ಲಿಯೂ ಅದಕ್ಕೆ ತೃಪ್ತಿ ಲಭಿಸಿಲ್ಲ.

ಇಸ್ಲಾಮ್ ಕೇವಲ ಒಂದು ಧರ್ಮವಲ್ಲ. ಅದು ಒಂದು ಜೀವನ ಸಿದ್ಧಾಂತ ಮತ್ತು ಅತ್ಯುತ್ತಮ ಜೀವನ ವ್ಯವಸ್ಥೆಯಾಗಿದೆ. ಈ ಜೀವನ ಕ್ರಮವನ್ನು ಲೋಕದ ಅನೇಕ ರಾಷ್ಟ್ರಗಳು ಪಾಲಿಸುತ್ತಿವೆ.

ನನ್ನ ಸ್ವಂತ ಧಾರ್ಮಿಕ ವಿಚಾರಗಳು ಮತ್ತು ಪ್ರವಾದಿ ಜೀವನ ಚರಿತ್ರೆ ವಿವರಿಸುವ ಸಭೆಯಲ್ಲಿ ನನ್ನ ಪಾಲ್ಗೊಳ್ಳುವಿಕೆಯ ಮಧ್ಯೆ ಯಾವುದೇ ವಿರೋಧಾಭಾಸವಿಲ್ಲ. ಇಸ್ಲಾಮನ್ನು ಒಂದು ಜೀವನ ವ್ಯವಸ್ಥೆಯೆಂದು ತಿಳಿದೇ ನಾನು ಈ ಸಭೆಯಲ್ಲಿ ಭಾಗವಹಿಸುತ್ತಿದ್ದೇನೆ.

ಇಸ್ಲಾಮೀ ಜೀವನ ಸಿದ್ಧಾಂತ ಮತ್ತು ಇಸ್ಲಾಮೀ ಜೀವನ ವ್ಯವಸ್ಥೆಯನ್ನು ನಾವು ಹೊಗಳುವುದು ಏಕೆ? ಇಸ್ಲಾಮೀ ಜೀವನ ಸಿದ್ಧಾಂತವು ಮನುಷ್ಯ ಮನಸ್ಸಿನಲ್ಲಿ ಏಳುವ ಎಲ್ಲ ಸಂಶಯಗಳಿಗೆ ಅತ್ಯುತ್ತಮ ರೀತಿಯಲ್ಲಿ ಉತ್ತರ ನೀಡುತ್ತದೆ ಎಂಬುದಕ್ಕಾಗಿ ಮಾತ್ರ.

"ದೇವನೊಂದಿಗೆ ಯಾರನ್ನೂ ಸಹಭಾಗಿಗಳಾಗಿ ಮಾಡಬಾರದು" ಎಂಬುದು ಪ್ರವಾದಿವರ್ಯರ(ಸ) ಶಿಕ್ಷಣದಲ್ಲಿ ಅತ್ಯಂತ ಪ್ರಮುಖವಾದುದು. ಈ ಶಿಕ್ಷಣವನ್ನು ನಾನು ಮನಸಾರೆ ಗೌರವಿಸುತ್ತೇನೆ ಮತ್ತು ಅದನ್ನು ಮೆಚ್ಚುತ್ತೇನೆ.

ಈ ಶಿಕ್ಷಣವನ್ನು ಏಕೆ ಇಷ್ಟೊಂದು ಗೌರವಿಸಬೇಕು?

---

*ಶ್ರೀ ಅಣ್ಣಾದೊರೈ ಡಿ.ಎಂ.ಕೆ. ಪಕ್ಷದ ಸ್ಥಾಪಕರು. ಅವರು ಡಿ.ಎಂ.ಕೆ. ಸರಕಾರದ ಪ್ರಥಮ ಮುಖ್ಯಮಂತ್ರಿಯಾಗಿ ಚುನಾಯಿತರಾದರು. ಅವರು ಕೇವಲ ರಾಜಕಾರಣಿಯಾಗಿರದೆ ಓರ್ವ ದಾರ್ಶನಿಕರೂ ಆಗಿದ್ದರು. ಡಿ.ಎಂ.ಕೆ. ಮತ್ತು ಎ.ಐ.ಎ.ಡಿ.ಎಂ.ಕೆ. ವರ್ತುಲಗಳಲ್ಲಿ ಅವರನ್ನು ಬಹಳ ಗೌರವಾದರಗಳೊಂದಿಗೆ ಸ್ಮರಿಸಲಾಗುತ್ತದೆ.

ಏಕೆಂದರೆ, ಈ ಶಿಕ್ಷಣವು ಮನುಷ್ಯನನ್ನು ವಿಚಾರ ಮಾಡಲು ಪ್ರಚೋದಿಸುತ್ತದೆ ಮತ್ತು ಪ್ರೋತ್ಸಾಹಿಸುತ್ತದೆ.

ದೇವನೊಂದಿಗೆ ಯಾರನ್ನೂ ಸಹಭಾಗಿಗಳನ್ನಾಗಿ ಮಾಡಬಾರದು. ಏಕೆ? ದೇವನ ಅಸ್ತಿತ್ವ ಮತ್ತು ಗುಣಗಳೇನು? ಈ ಎಲ್ಲ ಸಮಸ್ಯೆಗಳ ಬಗ್ಗೆ ವಿಚಾರ ಮಾಡಲು ಈ ಶಿಕ್ಷಣವು ಸಂದರ್ಭ ಒದಗಿಸಿಕೊಡುತ್ತದೆ.

ಓರ್ವ ತಮಿಳು ಕವಿ ಮತ್ತು ದಾರ್ಶನಿಕ ಹೀಗೆ ಹೇಳಿರುತ್ತಾನೆ:

ಕಂಡವನು ಹೊಂದಲಿಲ್ಲ
ಹೊಂದಿದವನು ಕಾಣಲಿಲ್ಲ
ಕಂಡವನು ಹೇಳಲಿಲ್ಲ
ಹೇಳಿದವನು ಕಾಣಲಿಲ್ಲ

ದೇವನ ಗುಣಗಳು ನಿಸ್ಸೀಮ. ಅವುಗಳಲ್ಲಿ ತಲ್ಲೀನನಾಗಿ ನಿರಂತರ ಅವುಗಳಲ್ಲಿ ಮುಂದುವರಿಯುತ್ತಿರುವುದೇ ಮಹಾನತೆ.

ದೇವನೊಂದಿಗೆ ಇತರರನ್ನು ಸಹಭಾಗಿಗಳಾಗಿಸುವುದೆಂದರೆ ಅವರನ್ನು ದೇವನಿಗೆ ಸಮಾನರೆಂದು ಪರಿಗಣಿಸಿದಂತಾಗುವುದು.

ದೇವನ ಸಹಭಾಗಿ ಯಾರು ತಾನೇ ಆಗಲು ಸಾಧ್ಯ? ಆದುದರಿಂದಲೇ ಪ್ರವಾದಿ ವರ್ಯರು(ಸ) ಬಹುದೇವಾರಾಧನೆಯಿಂದ ಜನರನ್ನು ತಡೆದರು.

ಇತರ ಧರ್ಮಗಳಲ್ಲಿ ಬಹುದೇವಾರಾಧನೆಯ ಶಿಕ್ಷಣ ಮತ್ತು ಅನುಮತಿಯಿರುವುದ ರಿಂದ ನಮ್ಮಂಥವರು ಅನೇಕ ತರದ ನಷ್ಟಗಳಿಗೆ ಗುರಿಯಾಗಿದ್ದಾರೆ. ಬಹುದೇವಾರಾಧನೆಯ ಎಲ್ಲ ದಾರಿಗಳನ್ನು ಮುಚ್ಚುವ ಮೂಲಕ ಇಸ್ಲಾಮ್ ಮನುಷ್ಯನಿಗೆ ಹಿರಿಮೆ ಮತ್ತು ಔನ್ನತ್ಯವನ್ನು ನೀಡಿದೆಯಲ್ಲದೆ, ನೀಚತೆ ಮತ್ತದರ ಭಯಾನಕ ಪರಿಣಾಮಗಳಿಂದ ಅವನನ್ನು ರಕ್ಷಿಸಿದೆ.

ಇಸ್ಲಾಮ್ ಧರ್ಮ ಮನುಷ್ಯನನ್ನು ಪರಿಪೂರ್ಣ ಹಾಗೂ ಉತ್ತಮ ಮನುಷ್ಯನನ್ನಾಗಿ ಮಾಡುತ್ತದೆ. ದೇವನು ಯಾವ ಉನ್ನತಿಗೆ ತಲುಪಲಿಕ್ಕಾಗಿ ಮನುಷ್ಯನನ್ನು ಸೃಷ್ಟಿಸಿರುವನೋ ಆ ಉನ್ನತಿಯನ್ನು ಗಳಿಸಲು ಮತ್ತು ಅದರತ್ತ ಏರಲು ಬೇಕಾಗುವ ಶಕ್ತಿ-ಸಾಮರ್ಥ್ಯಗಳು ಇಸ್ಲಾಮಿನ ಮೂಲಕ ಉಂಟಾಗುತ್ತವೆ.

ದೇವನು ಸ್ವಯಂ ಪ್ರತ್ಯಕ್ಷನಾಗಿ ನನ್ನನ್ನು ದೇವನೆಂದು ಒಪ್ಪಿಕೊಳ್ಳೆಂದು ಮನುಷ್ಯನಿಗೆ ಆಜ್ಞಾಪಿಸಬಹುದಿತ್ತು. ಈ ರೀತಿಯಾಗುತ್ತಿದ್ದರೆ ಮನುಷ್ಯನಿಗೆ ತನ್ನ ಬುದ್ಧಿಶಕ್ತಿಯಿಂದ ಯೋಚಿಸುವ ಅಗತ್ಯವೇ ಬರುತ್ತಿರಲಿಲ್ಲ. ಇದು ಮನುಷ್ಯನ ಬುದ್ಧಿಶಕ್ತಿಗೆ ಒಂದು ದೊಡ್ಡ ಆಘಾತವಾಗುತ್ತಿತ್ತು. ಮನುಷ್ಯನು ಬುದ್ಧಿವಂತಿಕೆ ಮತ್ತು ಯೋಚನಾ ಶಕ್ತಿಯ ವಿಕಾಸ ದಿಂದ ವಂಚಿತನಾಗುತ್ತಿದ್ದ. ಆದರೆ ಪ್ರವಾದಿಯನ್ನು ನಿಯೋಗಿಸಿ "ಇದು ನನ್ನ ವತಿಯಿಂದ

ನಿಯೋಜಿತರಾದ ಪ್ರವಾದಿ" ಎಂಬ ಸಂದೇಶವನ್ನು ದೇವನು ನೀಡಿದಾಗ, ಮನುಷ್ಯನು ಬುದ್ಧಿಶಕ್ತಿಯನ್ನು ಉಪಯೋಗಿಸಿ ಯೋಚಿಸುವುದು ಅನಿವಾರ್ಯವಾಯಿತು. ಪ್ರವಾದಿತ್ವವನ್ನು ವಾದಿಸುತ್ತಿರುವ ಈ ವ್ಯಕ್ತಿಯನ್ನು ನಿಜಕ್ಕೂ ದೇವನು ನಿಯೋಗಿಸಿರುವನೇ? ಓರ್ವ ಪ್ರವಾದಿ ಯಲ್ಲಿರಬೇಕಾದ ಉತ್ತಮ ಗುಣಗಳೆಲ್ಲಾ ಈ ವ್ಯಕ್ತಿಯಲ್ಲಿವೆಯೇ? ಈ ಎಲ್ಲ ವಿಷಯಗಳ ಬಗ್ಗೆ ಯೋಚಿಸುವುದು ಆಗ ಮನುಷ್ಯನಿಗೆ ಅನಿವಾರ್ಯವಾಗುತ್ತದೆ. ಓರ್ವ ತಮಿಳು ಕವಿ ಹೇಳುತ್ತಾನೆ:

ಜ್ಞಾನವೇ ದೇವ- ದೇವನೇ ಜ್ಞಾನ.

ನಿಜವಾದ ಜ್ಞಾನವು ಖಂಡಿತ ಮನುಷ್ಯನಿಗೆ ದೇವನ ಪರಿಚಯ ಮಾಡಿಸುತ್ತದೆ. ದೇವನ ಬಗ್ಗೆ ಅರಿಯದವರು ಜ್ಞಾನದಿಂದಲೇ ವಂಚಿತರು. ಅವರಿಗೆ ತಮ್ಮ ಜ್ಞಾನದ ಬಗ್ಗೆ ಎಷ್ಟು ಹೆಮ್ಮೆ ಇದ್ದರೂ ಸರಿಯೇ.

ಇಸ್ಲಾಮಿನ ಇನ್ನೊಂದು ಗುಣ ವಿಶೇಷತೆಯೇನೆಂದರೆ, ಯಾರು ಆ ಧರ್ಮವನ್ನು ಸ್ವೀಕರಿಸಿದನೋ ಅವನು ಕುಲ ಗೋತ್ರಗಳ ಭೇದಭಾವವನ್ನು ಮರೆತೇ ಬಿಟ್ಟನು.

ಮುದಗತ್ತೂರಿ*ನಲ್ಲಿ ಪರಸ್ಪರ ಕತ್ತು ಕೊಯ್ಯುತ್ತಿದ್ದ ಜನರು ಇಸ್ಲಾಮ್ ಸ್ವೀಕರಿಸತೊಡಗಿದಾಗ, ಇಸ್ಲಾಮ್ ಅವರನ್ನು ಅಣ್ಣ ತಮ್ಮಂದಿರಾಗಿ ಮಾರ್ಪಡಿಸಿತು. ಎಲ್ಲ ಭೇದಭಾವವೂ ಕೊನೆಗೊಂಡಿತು. ನೀಚ ಕುಲದವರು ನೀಚರಾಗಿ ಉಳಿಯಲಿಲ್ಲ. ಎಲ್ಲರೂ ಸನ್ಮಾನ್ಯರೂ ಗೌರವಾನ್ವಿತರೂ ಆಗಿ ಮಾರ್ಪಟ್ಟರು. ಎಲ್ಲರಿಗೂ ಸಮಾನ ಹಕ್ಕುಗಳನ್ನು ನೀಡಿ ಪರಸ್ಪರ ಸಹೋದರತೆಯ ಬಂಧನದಲ್ಲಿ ಬಿಗಿಯಲಾಯಿತು.

ಇಸ್ಲಾಮಿನ ಈ ಗುಣವಿಶೇಷದಿಂದ ನಾನು ಬಹಳ ಪ್ರಭಾವಿತನಾಗಿದ್ದೇನೆ. ಯಾವುದೇ ಸಮಸ್ಯೆಯ ಎಲ್ಲ ಅಂಶಗಳನ್ನು ಆಳವಾಗಿ ವಿಶ್ಲೇಷಿಸುವ ವ್ಯಕ್ತಿಯಾದ ಬರ್ನಾಡ್ ಶಾ ಇಸ್ಲಾಮಿನ ತತ್ವಗಳ ವಿಶ್ಲೇಷಣೆಯ ಬಳಿಕ ಈ ರೀತಿ ಹೇಳಿದ್ದರು:

**"ಲೋಕದಲ್ಲಿ ಶಾಶ್ವತವಾಗಿ ಉಳಿಯುವ ಒಂದು ಧರ್ಮವಿದ್ದರೆ, ಅದು ಇಸ್ಲಾಮ್ ಮಾತ್ರವಾಗಿದೆ."**

ಪ್ರವಾದಿವರ್ಯರನ್ನು ನಾವೇಕೆ ಓರ್ವ ಮಹಾನ್ ವ್ಯಕ್ತಿಯೆಂದು ಪರಿಗಣಿಸುವುದು? ಅವರನ್ನು ನಾವು ಏಕಿಷ್ಟು ಹೊಗಳುತ್ತೇವೆ?

ಇಂದು 1957ರಲ್ಲಿ ನಾವು ಮನುಷ್ಯನ ಸ್ವಾಭಿಮಾನವನ್ನು ಬಡಿದೆಬ್ಬಿಸಲು ಮತ್ತು ಜನಸಾಮಾನ್ಯರಿಗೆ ಅವರ ಸ್ವಾಭಿಮಾನದ ಬಗ್ಗೆ ತಿಳುವಳಿಕೆ ನೀಡಲು ಒಂದಿಷ್ಟು ಪ್ರಯತ್ನ ಮಾಡಿದರೂ ಎಷ್ಟು ವಿರೋಧವೇಳುತ್ತದೆ. ಹದಿನಾಲ್ಕು ನೂರು ವರ್ಷಗಳ ಹಿಂದೆ ಪ್ರವಾದಿವರ್ಯರು ಮೂರ್ತಿಗಳನ್ನು ಪೂಜಿಸದಿರಿ, ಇವು ನಿಮ್ಮ ದೇವರಲ್ಲ, ಇವುಗಳ ಮುಂದೆ ತಲೆ ಬಾಗಬೇಡಿರಿ, ಕೇವಲ ಒಬ್ಬ ಸೃಷ್ಟಿಕರ್ತನನ್ನು ಮಾತ್ರ ಪೂಜಿಸಿರಿ ಎಂದು ಅನೇಕ ವಿಗ್ರಹಗಳನ್ನು ಪೂಜಿಸುವ ಬಹುದೇವಾರಾಧಕರ ಮಧ್ಯೆ ನಿಂತು ಹೇಳಿದರು.

*ಉಚ್ಛ ಮತ್ತು ನೀಚ ಜಾತಿಯವರ ಮಧ್ಯೆ ಭಯಾನಕ ಗಲಭೆಗಳಾಗುತ್ತಿದ್ದ ತಮಿಳ್ನಾಡಿನ ಒಂದು ಊರು.

ಈ ಘೋಷಣೆಗೆ ಎಷ್ಟು ಧೈರ್ಯಬೇಕು. ಈ ಸಂದೇಶಕ್ಕೆ ಎಷ್ಟು ವಿರೋಧವಾಗಿರಬಹುದು. ಆದರೆ ವಿರೋಧದ ಬಿರುಗಾಳಿಯ ಮಧ್ಯೆ ಅಚಲರಾಗಿ ನಿಂತು ಅವರು ಈ ಕ್ರಾಂತಿಕಾರಿ ಸಂದೇಶವನ್ನು ಸಾರಿದರು. ಇದು ಅವರ ಮಹಾನತೆಯ ಬಹುದೊಡ್ಡ ಪುರಾವೆ.

ಪ್ರವಾದಿವರ್ಯರಲ್ಲಿದ್ದ(ಸ) ಆ ಮನೋದಾರ್ಢ್ಯವನ್ನು ಇಂದಿಗೂ ಇಸ್ಲಾಮಿನ ಅನುಯಾಯಿಗಳು ಪಾಲಿಸುತ್ತಾರೆ.

ಇಸ್ಲಾಮಿ ಜೀವನ ವ್ಯವಸ್ಥೆಯು ಮನುಷ್ಯರಲ್ಲಿ ಏಕತೆಯನ್ನು ಸೃಷ್ಟಿಸುತ್ತದೆ. ಮನುಷ್ಯರಲ್ಲಿ ಜಾಗೃತಿಯನ್ನುಂಟು ಮಾಡುತ್ತದೆ. ಮಾನವರಲ್ಲಿ ಪರಸ್ಪರ ಸೋದರತೆ ಮತ್ತು ಪ್ರೇಮವನ್ನು ಕುದುರಿಸುತ್ತದೆ.

ಸಾಮಾನ್ಯವಾಗಿ ಧರ್ಮಗಳು ಮನುಷ್ಯನಲ್ಲಿ ಸಂಕುಚಿತ ಮನೋಭಾವವನ್ನು ಬೆಳೆಸುತ್ತವೆ. ಒಬ್ಬರನ್ನು ಮತ್ತೊಬ್ಬರ ವಿರುದ್ಧ ಎತ್ತಿ ಕಟ್ಟುತ್ತವೆ. ಪೋಲೀಸರೂ ಮಧ್ಯೆ ಪ್ರವೇಶಿಸಬೇಕಾದ ಪರಿಸ್ಥಿತಿಯುಂಟಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಈ ಜೀವನ ಸಿದ್ಧಾಂತ ಮತ್ತು ಈ ಜೀವನ ಕ್ರಮವು ಪ್ರೇಮದ ಬುನಾದಿಯಲ್ಲಿ ಮನುಷ್ಯರನ್ನು ಒಗ್ಗೂಡಿಸುತ್ತದೆ.

ಧರ್ಮ ಮತ್ತು ಸರಿಯಾದ ಜೀವನಕ್ರಮಗಳಲ್ಲಿ ಭಿನ್ನತೆಯಿರಲಾರದು. ಧರ್ಮದ ಕಲ್ಪನೆಯು ಅಪೂರ್ಣವೂ ಸೀಮಿತವೂ ಆಗಿದ್ದು ಧರ್ಮಕ್ಕೂ ಜೀವನದ ಸಾಮಾನ್ಯ ಸಮಸ್ಯೆಗಳಿಗೂ ಯಾವ ಸಂಬಂಧವೂ ಇಲ್ಲ ಎಂದು ಭಾವಿಸಿದರೆ ಮಾತ್ರ ಈ ಭಿನ್ನತೆಯುಂಟಾಗುತ್ತದೆ.

ನಿಜವಾದ ಧರ್ಮವು ಒಂದು ಸಮಗ್ರ ಜೀವನ ಕ್ರಮವಾಗಿದ್ದು, ಅದನ್ನು ಕಾರ್ಯತಃ ಅನುಸರಿಸಿದರೆ ಮನುಷ್ಯರಿಗೆ ಒಳಿತಾಗುವುದೇ ಹೊರತು ಕೇಡಾಗಲಾರದು. ಇದಕ್ಕೆ ಈ ಜೀವನ ಕ್ರಮವು ಸರಿಯಾದ ರೀತಿಯಲ್ಲಿ ಕಾರ್ಯವೆಸಗುವ ನ್ಯಾಯ, ಗೌರವಾದರ, ಶಾಂತಿ, ಸಮಾಧಾನ ಮತ್ತು ಮನುಷ್ಯನಿಗೆ ಅಗತ್ಯವಿರುವ ಎಲ್ಲವನ್ನೂ ನೀಡುವಂತಾಗುವ ಒಂದು ವಾತಾವರಣವನ್ನು ಸೃಷ್ಟಿಸುವ ಅಗತ್ಯವಿದೆ.

ವಾತಾವರಣವನ್ನು ಮನುಷ್ಯನು ಸೃಷ್ಟಿಸುತ್ತಾನೆ. ಸಾಮಾನ್ಯವಾಗಿ ಜನರು ವಾತಾವರಣಕ್ಕೆ ತಕ್ಕಂತೆ ತಮ್ಮನ್ನು ಹೊಂದಿಸಿಕೊಳ್ಳುತ್ತಾರೆ. ಯಾವುದೇ ಜೀವನ ಕ್ರಮ ಕಾರ್ಯತಃ ಜಾರಿಗೊಳ್ಳಲು ವಾತಾವರಣವು ಅನುವು ಮಾಡಿಕೊಡುತ್ತದೋ ಇಲ್ಲವೋ ಎಂಬುದರ ಚಿಂತೆ ಜನಸಾಮಾನ್ಯರಿಗಿರುವುದಿಲ್ಲ. ಅವರು ಕುರಿಮಂದೆಯಂತೆ ಕಣ್ಣು ಮುಚ್ಚಿ ನಡೆಯುತ್ತಿರುತ್ತಾರೆ.

ವಾತಾವರಣದ ದಿಕ್ಕು ಸರಿಯಾಗಿದೆಯೋ ಇಲ್ಲವೋ ಎಂದು ಪರಾಮರ್ಶಿಸುವವರೇ ದೊಡ್ಡ ವ್ಯಕ್ತಿಗಳು. ವಾತಾವರಣದ ದಿಕ್ಕು ಸರಿಯಾಗಿಲ್ಲವೆಂದು ಅವರಿಗೆ ಮನವರಿಕೆಯಾದಾಗ

ಅವರು ಅದರ ವಿರುದ್ಧ ದಿಕ್ಕಿಗೆ ನಡೆಯತೊಡಗುತ್ತಾರೆ. ಈ ರೀತಿ ವಿರುದ್ಧ ದಿಕ್ಕು ಅನುಸರಿಸುವುದರಿಂದ ಅವರಿಗಾಗಬಹುದಾದ ಕಷ್ಟನಷ್ಟಗಳನ್ನು ಅವರು ಲೆಕ್ಕಿಸು ವುದಿಲ್ಲ. ನೈಜ ಹಾಗೂ ಸರಿಯಾದ ಜೀವನಕ್ರಮಕ್ಕೆ ವ್ಯಾವಹಾರಿಕ ರೂಪ ನೀಡಲಿಕ್ಕಾಗಿ ಅವರು ವಿರುದ್ಧ ದಿಕ್ಕಿನಲ್ಲಿ ಚಲಿಸುವ ದೃಢ ನಿರ್ಧಾರ ಕೈಗೊಳ್ಳುತ್ತಾರೆ. ವಾತಾವರಣವನ್ನು ಬದಲಾಯಿಸುವ ತನಕ ಹಾಗೆಯೇ ನಡೆಯುತ್ತಿರುತ್ತಾರೆ. ಕಷ್ಟ-ನಷ್ಟಗಳನ್ನು ಸಹಿಸಿಯೂ ಸತ್ಯ ಮಾರ್ಗದಲ್ಲಿಯೇ ನಡೆಯುವ ಧೈರ್ಯ ಉಳ್ಳವರೇ ನಿಜವಾಗಿ ಕೆಲಸಕ್ಕೆ ಬರುವ ವ್ಯಕ್ತಿಗಳು. ಇಂತಹ ವ್ಯಕ್ತಿಗಳು ಮಾತ್ರ ಸರಿಯಾದ ಜೀವನ ಕ್ರಮ ಜಾರಿಯಾಗುವಂತೆ ವಾತಾವರಣದೊಂದಿಗೆ ಸಂಘರ್ಷ ಹೂಡುವ ಸಾಹಸವನ್ನು ತೋರುತ್ತಾರೆ.

ಪ್ರವಾದಿ ಮುಹಮ್ಮದ್(ಸ) ಇಂತಹ ಮಹಾನ್ ಹಾಗೂ ಸಾಹಸಿ ವ್ಯಕ್ತಿಯಾಗಿದ್ದರು. ಮಾತ್ರವಲ್ಲ ಅವರ ವ್ಯಕ್ತಿತ್ವ ಇತರ ಮಹಾನ್ ವ್ಯಕ್ತಿಗಳಿಗಿಂತ ಎಷ್ಟೋ ಉನ್ನತವಾಗಿತ್ತು. ಇಂತಹ ಮಹಾನತೆ ಮತ್ತು ಹಿರಿಮೆಯ ವ್ಯಕ್ತಿಯ ಶಿಕ್ಷಣವನ್ನು ದೇಶದಲ್ಲಿ ಪ್ರಚಾರ ಗೊಳಿಸುವ ಅಗತ್ಯವಿದೆ. ಈ ಶಿಕ್ಷಣದ ಪ್ರಚಾರಕ್ಕೆ ಉತ್ತಮ ವಾತಾವರಣದ ಅಗತ್ಯವಿದೆ. ಅದಕ್ಕೆ ಉತ್ತಮ ವಿದ್ಯಾಭ್ಯಾಸ ಪದ್ಧತಿ ಜಾರಿಗೆ ತರುವುದು ಅತ್ಯಗತ್ಯ. ಉತ್ತಮ ವಿದ್ಯಾಭ್ಯಾಸ ಪದ್ಧತಿಗೆ ಉತ್ತಮ ಆಡಳಿತ ಪದ್ಧತಿಯ ಅಗತ್ಯವಿದೆ. ಉತ್ತಮ ಆಡಳಿತಗಾರರಿಲ್ಲದ ಒಂದು ಉತ್ತಮ ಸರಕಾರವನ್ನು ಕಲ್ಪಿಸಿ ಕೊಳ್ಳುವುದು ಕೂಡಾ ಅಸಾಧ್ಯ. ಈ ಉತ್ತಮ ಆಡಳಿತಗಾರರು ಉತ್ತಮ ಪ್ರಜೆಗಳಿಂದಲೇ ದೊರೆಯಬಹುದು. ಇದರಿಂದ ಉತ್ತಮ ವ್ಯಕ್ತಿಗಳ ಮಹತ್ವ ಮತ್ತು ಅವರ ಸ್ಥಾನಮಾನಗಳನ್ನು ಚೆನ್ನಾಗಿ ಗ್ರಹಿಸಬಹುದು. ಇಂತಹ ವ್ಯಕ್ತಿಗಳೇ ವಾಸ್ತವದಲ್ಲಿ ಒಂದು ಸಮಾಜದ ನೈಜ ಬಂಡವಾಳವೆನಿಸುತ್ತಾರೆ. ಅವರ ಮೇಲೆಯೇ ಸಂಪೂರ್ಣ ಸಮಾಜದ ಭವಿಷ್ಯವು ಆಧರಿಸಿದೆ. ಅವರ ಅಭಾವ ಮಾನವ ಕುಲದ ಅತಿ ದೊಡ್ಡ ನಷ್ಟವಾಗಿದೆ.

ಇಸ್ಲಾಮ್ ಎಂಬುದು ವಜ್ರದಂತೆ. ವಜ್ರವನ್ನು ವಿಭಿನ್ನ ಜನರು ವಿಭಿನ್ನ ರೀತಿಯಲ್ಲಿ ಉಪಯೋಗಿಸುತ್ತಾರೆ. ಕೆಲವರು ಅದನ್ನು ಉಂಗುರಗಳಲ್ಲಿಯೂ ಆಭರಣಗಳಲ್ಲಿಯೂ ಇರಿಸುತ್ತಾರೆ. ಇನ್ನು ಕೆಲವರು ಅದನ್ನು ಮಾರಿ ಬಂದ ಹಣವನ್ನು ಭೋಗ ವಿಲಾಸಕ್ಕಾಗಿ ವ್ಯಯಿಸುತ್ತಾರೆ.

ವಜ್ರದ ಮಹತ್ವ, ಅದರ ಪ್ರಯೋಜನ ಅಥವಾ ಅದರ ನಷ್ಟವು ನಿಜವಾಗಿ ಅದನ್ನು ಬಳಸುವ ರೀತಿಯಲ್ಲಿದೆ. ವಜ್ರಕ್ಕಿಂತಲೂ ಬೆಲೆ ಬಾಳುವ ಈ ಜೀವನಕ್ರಮದೊಂದಿಗ ನಮ್ಮ ವ್ಯವಹಾರವೇನೆಂಬುದರ ಬಗ್ಗೆ ನಾವು ಯೋಚಿಸಬೇಕಾಗಿದೆ.

ಈ ಧರ್ಮವು ಅಕ್ರಮಿಗಳ ಮತ್ತು ದುಷ್ಟ ಜನರ ಪಕ್ಷ ವಹಿಸುವುದೇ? ಇದು ನಿರ್ಗತಿಕರ ಹಕ್ಕುಗಳನ್ನು ಕಸಿಯುವುದೇ? ಅಥವಾ ಇದಕ್ಕೆ ವ್ಯತಿರಿಕ್ತವಾಗಿ ಇದು ದಲಿತ ಮತ್ತು ಶೋಷಿತ ಜನರಿಗೆ ನೆರವಾಗುವುದೇ?

ಕಾರ್ಯರೂಪದಲ್ಲಿ ಮೊದಲು ಪ್ರಸ್ತಾಪಿಸಿದ ಪರಿಣಾಮಗಳೇ ಮುಂದೆ ಬರುವುದಾದರೆ, ಇಸ್ಲಾಮನ್ನು ನಾವೆಷ್ಟು ಹೊಗಳಿದರೂ ಅದಕ್ಕೆ ಯಾವ ಬೆಲೆಯೂ ಇಲ್ಲ. ಆದರೆ ಪರಿಣಾಮ ದ್ವಿತೀಯ ರೂಪದಲ್ಲಿ ಪ್ರತ್ಯಕ್ಷವಾಗುತ್ತಿದ್ದರೆ, ಈ ಜೀವನ ಕ್ರಮ ಜಗತ್ತಿಗೆ ಒಂದು ಅನುಗ್ರಹವೆಂಬುದನ್ನು ಖಂಡಿತ ಜನರು ಅರಿಯುವರು.

ಇಸ್ಲಾಮ್ ತನ್ನೆಲ್ಲ ಗುಣವಿಶೇಷತೆಗಳೊಂದಿಗೆ ಇಂದಿಗೂ ವಜ್ರದಂತೆಯೇ ಪ್ರಕಾಶಮಾನವಾಗಿ ಶೋಭಿಸುತ್ತದೆ. ಅದರ ಅನುಯಾಯಿಗಳು ಅದನ್ನು ಪೂರ್ಣ ರೂಪದಲ್ಲಿ ನಿಸ್ವಾರ್ಥವಾಗಿ ಅನುಸರಿಸಬೇಕು. ಈ ರೀತಿ ಅವರು ತಮ್ಮ ಪ್ರಭುವಿನ ಸಂಪ್ರೀತಿಯನ್ನು ಗಳಿಸಬಹುದು. ಬಡವರ ಮತ್ತು ನಿರ್ಗತಿಕರ ಸಮಸ್ಯೆಗಳನ್ನೂ ಬಗೆಹರಿಸಬಹುದು. ಹೀಗೆ ಮಾನವಕುಲವು ಭೌತಿಕ ಮತ್ತು ಆಧ್ಯಾತ್ಮಿಕ ಪ್ರಗತಿಯ ಪಥದಲ್ಲಿ ಶೀಘ್ರ ಗತಿಯಲ್ಲಿ ಮುಂದುವರಿದೀತು.

# ಇಸ್ಲಾಮ್: ಜಗದ್ವಿಖ್ಯಾತರ ದೃಷ್ಟಿಯಲ್ಲಿ

ನಮ್ಮಲ್ಲಿನ ದಾರ್ಶನಿಕ ಅಣ್ಣಾದೊರೈಯವರು ಪ್ರವಾದಿಯವರನ್ನು ಯಾವ ರೀತಿ ಗೌರವಾದರಗಳಿಂದ ವೀಕ್ಷಿಸುತ್ತಿದ್ದರೆಂಬುದನ್ನು ಈ ಹಿಂದೆ ಪ್ರಸ್ತಾಪಿಸಿದ್ದೇನೆ. ಕೇವಲ ಅಣ್ಣಾದೊರೈ ಮಾತ್ರವಲ್ಲ, ಲೋಕದ ವಿಭಿನ್ನ ರಾಷ್ಟ್ರಗಳ ಬುದ್ಧಿಜೀವಿಗಳು ಮತ್ತು ದಾರ್ಶನಿಕರು ಪ್ರವಾದಿವರ್ಯರ(ಸ) ಮಹಾನತೆಯನ್ನು ಒಪ್ಪಿಕೊಂಡಿದ್ದಾರೆ. ನೆಪೋಲಿಯನ್‌ನಿಂದ ಹಿಡಿದು ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾದ ಸಂಪಾದಕರ ತನಕ ಎಲ್ಲರೂ ಅವರನ್ನು ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ.

"ಎಲ್ಲ ದೇಶಗಳ ಆಡಳಿತಗಾರರು ಒಟ್ಟಾಗಿ ಕುರ್‌ಆನಿನ ತತ್ವಗಳಂತೆ ಒಂದೇ ರೀತಿಯ ಆಡಳಿತ ವ್ಯವಸ್ಥೆಯನ್ನು ಅನುಸರಿಸುವ ದಿನ ದೂರವಿಲ್ಲ. ಕುರ್‌ಆನಿನ ತತ್ವಗಳು ಮತ್ತು ಶಿಕ್ಷಣ ಸತ್ಯದ ಮೇಲೆ ಆಧರಿಸಿವೆ ಮತ್ತು ಅವು ಮಾನವಕುಲವನ್ನು ಸುಖ-ಸಮೃದ್ಧಿಗಳಿಂದ ತುಂಬುವಂಥದ್ದಾಗಿವೆ. ಆದುದರಿಂದ ದೇವನಿಂದ ನಿಯುಕ್ತರಾದ ಪ್ರವಾದಿ ಮುಹಮ್ಮದ್(ಸ) ಮತ್ತು ಅವರ ಮೇಲೆ ಅವತೀರ್ಣವಾದ ಗ್ರಂಥ ಪವಿತ್ರ ಕುರ್‌ಆನಿನ ಬಗ್ಗೆ ನನಗೆ ಹೆಮ್ಮೆಯಿದೆ. ನಾನವರಿಗೆ ನನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ" ಎಂದು ನೆಪೋಲಿಯನ್ ಹೇಳಿರುವನು.

ಡಾ॥ ಸ್ಯಾಮ್ಯೆಲ್ ಜಾನ್ಸನ್ ತಮ್ಮ ಜಗತ್ಪ್ರಸಿದ್ಧ ಗ್ರಂಥ "ಓರಿಯಂಟಲ್ ರಿಲೀಜನ್ಸ್" ನಲ್ಲಿ ಈ ರೀತಿ ಬರೆದಿದ್ದಾರೆ: "ಕುರ್‌ಆನ್ ಗದ್ಯವೂ ಅಲ್ಲ, ಪದ್ಯವೂ ಅಲ್ಲ. ಆದರೆ ಅದು ಗದ್ಯದ ಪ್ರಭಾವವನ್ನೂ ಪದ್ಯದ ಸೌಂದರ್ಯವನ್ನೂ ಹೊಂದಿದೆ. ಅದು ಇತಿಹಾಸವೂ ಅಲ್ಲ, ಜೀವನ ಚರಿತ್ರೆಯೂ ಅಲ್ಲ. ಆದರೆ ಉಪದೇಶ ಮತ್ತು ಪಾಠ ನೀಡುವುದರಲ್ಲಿ ಅವೆಲ್ಲವುಗಳಿಗಿಂತಲೂ ಹೆಚ್ಚು ಪ್ರಭಾವಶಾಲಿಯಾಗಿದೆ."

ಹ. ಮೂಸಾರಿಗೆ(ಅ) ತೌರಾತ್ ಒಂದೇ ಬಾರಿಗೆ ನೀಡಲಾಗಿತ್ತು. ಆದರೆ ಕುರ್‌ಆನ್ ಒಂದೇ ಸಲ ಅವತೀರ್ಣವಾಗಲಿಲ್ಲ. ಅದನ್ನು ಒಮ್ಮೆಲೇ ಜನತೆಯ ಮುಂದೆ ತರಲೂ ಇಲ್ಲ. ಪ್ಲಾಟೋನ ಗ್ರಂಥದಲ್ಲಿ ಅನ್ವೇಷಣೆಯ ಶೈಲಿಯನ್ನು ಬಳಸಲಾಗಿದೆ. ಆದರೆ ಕುರ್‌ಆನ್ ತನ್ನದೇ ಆದ ವಿಶಿಷ್ಟ ಶೈಲಿಯನ್ನು ಹೊಂದಿದೆ. ಅದೊಂದು ಸತ್ಯಾಹ್ವಾನ ನೀಡುವವನ ಕರೆಯಾಗಿದೆ. ನಿರಂತರ ಪರಿಶ್ರಮದ ಸ್ಫೂರ್ತಿ ಮತ್ತು ಸತ್ಕರ್ಮಗಳಿಗೆ ಪ್ರೇರಣೆ ನೀಡುವ ಯುಕ್ತಿಯುಕ್ತವಾದ ಗ್ರಂಥ. ತನ್ನ ಕರೆಯನ್ನು ವಿರೋಧಿಸುವವರಿಗೆ ಸವಾಲೊಡ್ಡುವ ಗ್ರಂಥ. ಸಹಾನುಭೂತಿ ಮತ್ತು ಕಳಕಳಿಯೊಂದಿಗೆ ಅವರಿಗೆ ಮನವರಿಕೆ ಮಾಡಿಕೊಡುವ ಗ್ರಂಥ. ಎಲ್ಲ ರಾಷ್ಟ್ರ ಮತ್ತು ಎಲ್ಲ ಕಾಲಗಳಲ್ಲಿ ಜನರು ತಿಳಿದೋ ತಿಳಿಯದೆಯೋ, ಬಯಸಿಯೋ ಬಯಸದೆಯೋ ಅದರ ಶಿಕ್ಷಣದ ಪ್ರಭಾವಕ್ಕೆ ಒಳಗಾಗುವಂತಹ ಯುಕ್ತಿಯಿಂದ

ಕೂಡಿದ ಸಮಗ್ರ ಗ್ರಂಥ. ಅದರ ಪ್ರತಿಧ್ವನಿ ಆಡಳಿತ ಭವನಗಳಲ್ಲಿಯೂ ಮರಳುಗಾಡಿನಲ್ಲಿಯೂ ನಗರಗಳಲ್ಲಿಯೂ ಹಳ್ಳಿಗಳಲ್ಲಿಯೂ ಕೇಳಿಸುತ್ತದೆ. ಯಾವುದೇ ತಾರತಮ್ಯವಿಲ್ಲದೆ ಪ್ರತಿಯೊಬ್ಬರ ಮೇಲೂ ಅದರ ಮುದ್ರೆ ಬೀಳುತ್ತದೆ.

ಪ್ರಪ್ರಥಮವಾಗಿ ಈ ಗ್ರಂಥವು ತನ್ನ ಕರೆಗೆ ಓಗೊಟ್ಟವರ ಮನಸ್ಸಿನಲ್ಲಿ ಆವೇಶ ತುಂಬಿತು. ಆ ಬಳಿಕ ಅವರನ್ನು ಒಂದು ಸಾಮೂಹಿಕ ಆಂದೋಲನವಾಗಿ ಮಾರ್ಪಡಿಸಿತು. ಈ ಆಂದೋಲನವು ಬಿರುಗಾಳಿಯಂತೆ ಎದ್ದಿತು. ಅದು ಇರಾನ್ ಮತ್ತು ಇತರ ಏಶ್ಯನ್ ರಾಷ್ಟ್ರಗಳನ್ನು ದಾಟುತ್ತಾ ಬಹಳ ದೂರ ಮುಟ್ಟಿತು. ಅಲ್ಲಿದ್ದ ಎಲ್ಲ ರಚನಾತ್ಮಕ ವಿಚಾರಗಳನ್ನು ಅದು ತನ್ನಲ್ಲಿ ಅಳವಡಿಸಿಕೊಂಡಿತು ಮತ್ತು ಅಂಧಕಾರದಲ್ಲಿ ತೊಳಲಾಡುತ್ತಿದ್ದ ಕ್ರೈಸ್ತ ಯೂರೋಪಿಗೆ ವಿವೇಕ ಮತ್ತು ಯುಕ್ತಿಗಳ ಪಾಠ ನೀಡಿತು.

ಪವಿತ್ರ ಕುರ್‌ಆನಿನ ಪ್ರಥಮ ಆಂಗ್ಲ ಭಾಷಾಂತರಕಾರ ಮಿ| ರಾಡ್‌ವೆಲ್ ತನ್ನ ಮುನ್ನುಡಿಯಲ್ಲಿ ಕುರ್‌ಆನನ್ನು ಈ ರೀತಿ ವರ್ಣಿಸಿದ್ದಾರೆ:

"ಅರೇಬಿಯಾದ ನಿರಕ್ಷರಿ, ಅಜ್ಞಾನಿ ಮತ್ತು ಅಸಭ್ಯ ಜನತೆಯನ್ನು ಅಲ್ಪ ಕಾಲದಲ್ಲಿ ಲೋಕದ ನಾಯಕತ್ವ ಮತ್ತು ಆಡಳಿತ ವಹಿಸಲು ಶಕ್ತರಾಗಿ ಮಾಡಿದ ಗ್ರಂಥ ಕೇವಲ ಇದೊಂದೇ. ಯಾರೋ ಮಂತ್ರದಂಡ ತಿರುಗಿಸಿ ಕ್ಷಣಾರ್ಧದಲ್ಲಿ ಅರಬರಲ್ಲಿ ಈ ಮಹಾನ್ ಕ್ರಾಂತಿಯನ್ನು ತಂದಂತೆ."

1945ರ ಜನವರಿ 1ರಂದು ಶ್ರೀಮತಿ ಸರೋಜಿನಿ ನಾಯ್ಡುರವರು ಕಲ್ಕತ್ತಾದ ಮುಸ್ಲಿಮ್ ಇನ್‌ಸ್ಟಿಟ್ಯೂಟ್ ಹಾಲ್‌ನಲ್ಲಿ ತನ್ನ ಅಭಿಪ್ರಾಯವನ್ನು ಈ ರೀತಿ ಪ್ರಕಟಿಸಿದ್ದಾರೆ:

"ಪವಿತ್ರ ಕುರ್‌ಆನ್ ಶಿಷ್ಟಾಚಾರ ಮತ್ತು ನ್ಯಾಯದ ಪ್ರಣಾಳಿಕೆಯಾಗಿದೆ. ಸ್ವಾತಂತ್ರ್ಯದ ಘೋಷಣಾ ಪತ್ರವಾಗಿದೆ. ದೈನಂದಿನ ಜೀವನದಲ್ಲಿ ಸತ್ಯ-ನ್ಯಾಯಗಳ ಶಿಕ್ಷಣ ನೀಡುವ ಕಾನೂನಿನ ಮಹಾನ್ ಗ್ರಂಥವಾಗಿದೆ. ಇನ್ನಾವುದೇ ಧಾರ್ಮಿಕ ಗ್ರಂಥ ಜೀವನದಲ್ಲಿ ಎಲ್ಲ ಸಮಸ್ಯೆಗಳ ವ್ಯಾವಹಾರಿಕ ವ್ಯಾಖ್ಯಾನ ಮತ್ತು ಪರಿಹಾರ ನೀಡುವುದಿಲ್ಲ."

ಜರ್ಮನಿಯ ಓರ್ವ ದಾರ್ಶನಿಕ ಗೋಯಥೆ ಹೀಗೆ ಹೇಳಿರುವನು:

"ನಾನು ಕುರ್‌ಆನನ್ನು ನೋಡಿದಾಗಲೆಲ್ಲ ಹೊಸ ಹೊಸ ಅರ್ಥವನ್ನು ಅದು ಹೊರಗೆಡಹುತ್ತಲೇ ಇರುತ್ತದೆ. ಈ ಗ್ರಂಥದ ಆಕರ್ಷಣೆಯು ತನ್ನ ಓದುಗರನ್ನು ಮೆಲ್ಲಮೆಲ್ಲನೆ ಸೆಳೆಯುತ್ತದೆ ಮತ್ತು ಕಟ್ಟಕಡೆಗೆ ಅವರ ಮನ ಮಸ್ತಿಷ್ಕಗಳನ್ನು ಆವರಿಸುತ್ತದೆ."

ಪ್ರಖ್ಯಾತ ಚರಿತ್ರೆಕಾರ ಗಿಬ್ಬನ್ ಆ ಗ್ರಂಥವನ್ನು ಈ ರೀತಿ ಹೊಗಳಿದ್ದಾರೆ:

"ಏಕದೇವ ಸಿದ್ಧಾಂತವನ್ನು ಸ್ಪಷ್ಟ ಶಬ್ದಗಳಲ್ಲಿ ವಿವರಿಸುವ ಮತ್ತು ಹೃದಯಗಳಲ್ಲಿ ಏಕದೇವತ್ವದ ಅಚ್ಚೊತ್ತುವ ಮಹಾನ್ ಗ್ರಂಥ ಪವಿತ್ರ ಕುರ್‌ಆನ್ ಆಗಿದೆ."

ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾದ ಸಂಪಾದಕರು ಈ ರೀತಿ ಬರೆದಿದ್ದಾರೆ:

"ಲೋಕದಲ್ಲಿ ಅತ್ಯಧಿಕ ಓದಲ್ಪಡುವ ಮತ್ತು ಕಂಠಪಾಠ ಮಾಡಲ್ಪಡುವ ಗ್ರಂಥ ಪವಿತ್ರ ಕುರ್‌ಆನ್ ಆಗಿದೆ. ಈ ಮೇಲ್ಮೆ ಜಗತ್ತಿನ ಬೇರಾವ ಧಾರ್ಮಿಕ ಗ್ರಂಥಕ್ಕೂ ದಕ್ಕಿಲ್ಲ."

# ವೇದಗಳಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ಬಗ್ಗೆ ಭವಿಷ್ಯವಾಣಿ

ಮುಹಮ್ಮದ್(ಸ) ಅರಬ್ ದೇಶದಲ್ಲಿ 6ನೇ ಶತಮಾನದಲ್ಲಿ ಹುಟ್ಟಿದರು. ಆದರೆ ಅದಕ್ಕಿಂತ ಎಷ್ಟೋ ಮುಂಚೆ ಅವರ ಆಗಮನದ ಬಗ್ಗೆ ಹಿಂದೂ ಧರ್ಮದ ವೇದಗಳಲ್ಲಿ ಭವಿಷ್ಯ ನುಡಿಯಲಾಗಿದೆ. ಓರ್ವ ಹಿರಿಯರಿಂದ ಈ ವಿಷಯ ಕೇಳಿ ಆ ಬಗ್ಗೆ ನಾನು ಅದನ್ನು ಹುಡುಕಿದೆ. ವೇದಗಳಲ್ಲಿ ಪ್ರವಾದಿವರ್ಯರ(ಸ) ಆಗಮನದ ಬಗ್ಗೆ ಭವಿಷ್ಯವಾಣಿ ನೋಡಿ ಆಶ್ಚರ್ಯ ಚಕಿತನಾದೆ. ಮಹರ್ಷಿ ವ್ಯಾಸರ 18 ಪುರಾಣಗಳ ಪೈಕಿ ಭವಿಷ್ಯ ಪುರಾಣವೂ ಒಂದು. ಅದರ ಒಂದು ಶ್ಲೋಕ ಈ ರೀತಿಯಿದೆ:

"ಹೊರ ರಾಷ್ಟ್ರ ಒಂದರಲ್ಲಿ ಓರ್ವ ಆಚಾರ್ಯ ತನ್ನ ಸಂಗಾತಿಗಳೊಂದಿಗೆ ಆಗಮಿಸುವರು. ಅವರ ಹೆಸರು ಮಹಾಮದ ಎಂದಾಗಿರುವುದು. ಅವರು ಮರುಭೂಮಿ ಪ್ರದೇಶದಲ್ಲಿ ಆಗಮಿಸುವರು." (ಭವಿಷ್ಯ ಪುರಾಣ ಅಧ್ಯಾಯ 3, ಶ್ಲೋಕ 3, ಸೂತ್ರ 5 ರಿಂದ 8)

ಈ ಶ್ಲೋಕ ಮತ್ತು ಸೂತ್ರದಲ್ಲಿ ಹೆಸರು ಹಾಗೂ ಸ್ಥಳದ ಸ್ಪಷ್ಟ ಸೂಚನೆಗಳಿವೆ. ಬರಲಿರುವ ಮಹಾನ್ ವ್ಯಕ್ತಿತ್ವದ ಇನ್ನೂ ಕೆಲವು ಕುರುಹುಗಳನ್ನು ಈ ರೀತಿ ವಿವರಿಸಲಾಗಿದೆ:

"ಅವರು ವೃತ್ತಚ್ಛೇದ ಮಾಡಿದವರಾಗಿರುವರು. ಅವರಿಗೆ ಶಿಖೆ ಇರದು. ಅವರು ಗಡ್ಡ ಬೆಳೆಸುವರು. ಮಾಂಸ ಭಕ್ಷಿಸುವರು. ತನ್ನ ಸಂದೇಶವನ್ನು ವ್ಯಕ್ತವಾದ ಭಾಷೆಯಲ್ಲಿ ಪ್ರಭಾವಶಾಲಿಯಾಗಿ ಮುಂದಿಡುವರು. ತನ್ನ ಸಂದೇಶದ ಮೇಲೆ ವಿಶ್ವಾಸ ತರುವವರನ್ನು ಮುಸ್ಲಾಯೀ ಎಂಬ ಹೆಸರಿನಿಂದ ಕರೆಯುವರು." (ಅಧ್ಯಾಯ 3, ಶ್ಲೋಕ 25, ಸೂತ್ರ 3)

ಈ ಸೂತ್ರವನ್ನು ಗಮನವಿಟ್ಟು ನೋಡಿರಿ. ವೃತ್ತಚ್ಛೇದ(ಸುನ್ನತ್)ದ ಪದ್ಧತಿ ಹಿಂದುಗಳಲ್ಲಿರಲಿಲ್ಲ. ಶಿಖೆ ಇಲ್ಲಿಯ ಧಾರ್ಮಿಕ ಲಾಂಛನವಾಗಿತ್ತು. ಬರಲಿರುವ ವ್ಯಕ್ತಿ ಈ ಅಪರಿಚಿತ ಕುರುಹುಗಳನ್ನು ಹೊಂದಿದ್ದಾರೆ ಎಂಬುದೇ ಅವರ ಸ್ಪಷ್ಟ ನಿದರ್ಶನ. ಮಾತ್ರವಲ್ಲ ಈ ಸಂದೇಶದ ಮೇಲೆ ವಿಶ್ವಾಸವಿರಿಸುವವರಿಗೆ ಮುಸ್ಲಾಯೀ ಎಂಬ ಹೆಸರಿದೆ. ಈ ಪದವು ಮುಸ್ಲಿಮ್ ಅಥವಾ ಮುಸಲ್ಮಾನ್ ಎಂಬುದರ ಕಡೆಗೆ ಸ್ಪಷ್ಟ ಸಂಕೇತವಾಗಿದೆ.

ಅಥರ್ವ ವೇದದ 20ನೇ ಅಧ್ಯಾಯದಲ್ಲಿ ಈ ಕೆಳಗಿನ ಶ್ಲೋಕವಿದೆ:

"ಓ ಭಕ್ತರೇ! ಇದನ್ನು ಗಮನವಿಟ್ಟು ಆಲಿಸಿರಿ. ಸ್ತುತಿಸಲ್ಪಟ್ಟವನು, ಸ್ತುತಿಸಲ್ಪಡುವವನು ಆ ಮಹಾಮಯೆ, ಅತಿಥಿ, ಋಷಿ ಅರ್ವತ್ತು ಸಾವಿರದ ತೊಂಬತ್ತು ಜನರ ಮಧ್ಯೆ ಆಗಮಿಸುವನು."

ಮುಹಮ್ಮದ್ ಎಂಬ ಪದದ ಅರ್ಥ ಸ್ತುತಿಸಲ್ಪಟ್ಟವನು ಎಂದಾಗಿದೆ. ಅವರ ಜನನದ ವೇಳೆ ಮಕ್ಕಾ ನಗರದ ಜನಸಂಖ್ಯೆ 60 ಸಾವಿರವಿತ್ತು.

"ಅವರು 20 ಗಂಡು ಮತ್ತು ಹೆಣ್ಣೊಂಟೆಗಳ ಮೇಲೆ ಸವಾರಿ ಮಾಡುವರು. ಅವರ ಸ್ತುತಿ-ಸ್ತೋತ್ರಗಳು ಸ್ವರ್ಗ ಲೋಕದ ತನಕ ಆಗುವುದು. ಆ ಮಹಾ ಋಷಿಗೆ ನೂರು ಬಂಗಾರದ ಆಭರಣಗಳಿರುವುವು."

ಒಂಟೆಯ ಮೇಲೆ ಸವಾರಿ ಮಾಡುವ ಮಹಾಋಷಿ ಭಾರತದಲ್ಲಿ ನಮಗೆ ಸಿಗುವುದಿಲ್ಲ. ಆದುದರಿಂದ ಈ ಸಂಕೇತ ಪ್ರವಾದಿ ಮುಹಮ್ಮದ್‌ರ ಕಡೆಗೇ ಆಗಿದೆ.

ನೂರು ಬಂಗಾರದ ಆಭರಣಗಳೆಂದರೆ ಇಥಿಯೋಪಿಯಾಕ್ಕೆ ವಲಸೆ ಹೋದ ಪ್ರವಾದಿ ವರ್ಯರ(ಸ) ನೂರು ಆಪ್ತ ಸಂಗಾತಿಗಳು.

"ಹತ್ತು ಮುತ್ತುಗಳ ಹಾರ, ಮುನ್ನೂರು ಅರಬೀ ಕುದುರೆಗಳು ಮತ್ತು ಹತ್ತು ಸಾವಿರ ದನಗಳು ಅವರ ಬಳಿ ಇರುವುವು."

"ಹತ್ತು ಸ್ವರ್ಗವಾಸಿಗಳು" ಎಂಬ ಬಿರುದು ಲಭಿಸಿದ ಪ್ರವಾದಿಯ ಹತ್ತು ಸಂಗಾತಿಗಳಿದ್ದರು. ಬದ್ರ್ ಯುದ್ಧದಲ್ಲಿ ಪಾಲ್ಗೊಂಡ 313 ಸಂಗಾತಿಗಳನ್ನು ಮುನ್ನೂರು ಅರಬೀ ಕುದುರೆಗಳು ಎಂದು ವರ್ಣಿಸಲಾಗಿದೆ. 10 ಸಾವಿರ ದನಗಳೆಂಬುದು ಪ್ರವಾದಿವರ್ಯರ ಅನುಯಾಯಿಗಳ ಬಹುಸಂಖ್ಯೆಯನ್ನು ಸೂಚಿಸುತ್ತದೆ.

ಪವಿತ್ರ ಕುರ್‌ಆನ್ ಪ್ರವಾದಿವರ್ಯರಿಗೆ(ಸ) "ವಿಶ್ವಕ್ಕೆ ಕರುಣೆ" ಎಂಬ ಬಿರುದು ನೀಡಿದೆ. ಋಗ್ವೇದದಲ್ಲಿ "ಕರುಣೆಯ ಬಿರುದು ಗಳಿಸಿದವನು, ಸ್ತುತಿಸಲ್ಪಟ್ಟವನು ಹತ್ತು ಸಹಸ್ರ ಸಂಗಾತಿಗಳೊಂದಿಗೆ ಬರುವನು" ಎಂದಿದೆ. (ಶ್ಲೋಕ 5, ಸೂತ್ರ 28)

ಇದೇ ರೀತಿ ವೇದಗಳಲ್ಲಿ ಮಹಾಮಯೆ, ಮಹಾಮದ್ ಮುಂತಾದ ಹೆಸರುಗಳಿಂದ ಅವರ ಆಗಮನದ ಪ್ರಸ್ತಾಪ ಬಂದಿದೆ.

# ಸರಿಸಾಟಿಯಿಲ್ಲದ ವ್ಯಕ್ತಿತ್ವ

ಮುಸ್ಲಿಮರು ಅಜ್ಞಾನಿಗಳು, ಹಠವಾದಿಗಳು, ಕೋಪಿಷ್ಠರು, ಅಕ್ರಮಿಗಳು, ಅಹಂಭಾವಿಗಳು ಎಂದೆಲ್ಲಾ ಮುಸ್ಲಿಮೇತರ ಬಂಧುಗಳ ಮಧ್ಯೆ ಪ್ರಚಾರವಿದೆ.

ಶೋಧ ನಡೆಸಿದರೆ ಮತ್ತು ಹತ್ತಿರ ಹೋಗಿ ನೋಡಿದರೆ ಬೇರೆಯೇ ಒಂದು ವಾಸ್ತವಿಕತೆ ಸೂರ್ಯನಿಗಿಂತ ಪ್ರಕಾಶಮಾನವಾಗಿ ಮುಂದೆ ಬರುತ್ತದೆ.

ಇಸ್ಲಾಮ್ ಎಂದರೆ ಶಾಂತಿ ಮತ್ತು ರಕ್ಷಣೆಯೆಂದರ್ಥ. ನನ್ನ ತಿಳುವಳಿಕೆಯ ಮಟ್ಟಿಗೆ ಮೃದು ಸ್ವಭಾವ, ವಿಕಾರಗಳ ಮೇಲೆ ನಿಯಂತ್ರಣ ಮತ್ತು ಸಂಯಮ ಶಕ್ತಿಯ ಅತ್ಯುತ್ತಮ ನಿದರ್ಶನವಿದ್ದರೆ ಅದು ಪ್ರವಾದಿ ಮುಹಮ್ಮದ್‌ರ ವ್ಯಕ್ತಿತ್ವ ಮಾತ್ರ.

ಎಲ್ಲ ಉತ್ತಮ ವ್ಯಕ್ತಿಗಳು ಮತ್ತು ಸುಧಾರಕರು ಉನ್ನತ ಗುಣಗಳನ್ನು ಹೊಂದಿರುತ್ತಾರೆ. ಆದರೆ ಮಾನವ ಇತಿಹಾಸದಲ್ಲಿ ಪ್ರವಾದಿ ಮುಹಮ್ಮದ್‌ರಂಥ(ಸ) ಸಮಗ್ರ ವ್ಯಕ್ತಿತ್ವವು ಎಲ್ಲಿಯೂ ಕಾಣ ಸಿಗುವುದಿಲ್ಲ. ಈ ಮಾತನ್ನು ನಾನು ಹೃದಯಾಂತರಾಳದಿಂದ ಹೇಳುತ್ತಿದ್ದೇನೆ.

ಅರೇಬಿಯಾದ ಆಡಳಿತಗಾರನಾಗಿದ್ದರೂ ಪ್ರವಾದಿವರ್ಯರು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು. ತಮ್ಮ ಪಾದರಕ್ಷೆಗಳನ್ನು ತಾವೇ ದುರಸ್ತಿ ಮಾಡಿಕೊಳ್ಳುತ್ತಿದ್ದರು. ತಮ್ಮ ಹರಿದ ಬಟ್ಟೆಗಳನ್ನು ತಾವೇ ಹೊಲಿದುಕೊಳ್ಳುತ್ತಿದ್ದರು. ಸಾಕು ಪ್ರಾಣಿಗಳಿಗೆ ತಮ್ಮ ಕೈಯಿಂದಲೇ ಆಹಾರ ನೀಡುತ್ತಿದ್ದರು ಮತ್ತು ಸ್ವಹಸ್ತಗಳಿಂದಲೇ ಹಾಲು ಕರೆಯುತ್ತಿದ್ದರು.

ಹಾಲು ಸೇವಿಸುವ ಮತ್ತು ಹಾಲಿನಲ್ಲೇ ಸ್ನಾನ ಮಾಡುವ ಆಡಳಿತಗಾರರನ್ನು ಜಗತ್ತು ಕಂಡಿದೆ. ಆದರೆ ಹಾಲು ಕರೆಯುವ ಏಕೈಕ ಆಡಳಿತಾಧಿಕಾರಿ ಪ್ರವಾದಿವರ್ಯರು ಮಾತ್ರ.

ದಕ್ಷಿಣ ಭಾರತದಲ್ಲಿ ನಡೆದ ಒಂದು ಘಟನೆ. ಓರ್ವ ಋಷಿ 'ವಾಯಿಗೈ' ನದಿಯ ಮಣ್ಣು ಹೊತ್ತು ಸಾಗಿಸಿದರು. ಅವರು ಕೂಲಿಗಾಗಿ ಮಣ್ಣು ಹೊತ್ತಿದ್ದರು. ಆದರೆ ರಾಜನಿಗೆ ಇದರ ಅರಿವಾದೊಡನೆ ಋಷಿಯಿಂದ ಮಣ್ಣು ಹೊರಿಸಿದವನಿಗೆ ಶಿಕ್ಷೆ ವಿಧಿಸಿದನು.

ಆದರೆ ಮದೀನಾದ ಮಸೀದಿ ನಿರ್ಮಾಣ ಕಾರ್ಯದಲ್ಲಿ ಪ್ರವಾದಿವರ್ಯರೂ(ಸ) ಪಾಲ್ಗೊಂಡಿರುವುದನ್ನು ನಾವು ಕಾಣುತ್ತೇವೆ. ಇದು ಇತಿಹಾಸದಲ್ಲೇ ಅಪೂರ್ವವಾದ ಮಾದರಿಯಾಗಿದೆ.

ಪ್ರವಾದಿವರ್ಯರ(ಸ) ಹಾಸಿಗೆಯೂ ಸರಳವಾಗಿತ್ತು. ಅವರು ಚಾಪೆ ಅಥವಾ ಚರ್ಮದ ಮೇಲೆ ಮಲಗುತ್ತಿದ್ದರು. ಕೆಲವೊಮ್ಮೆ ನೆಲದಲ್ಲೂ ಮಲಗುತ್ತಿದ್ದರು.

ಅವರ ಮನೆಯೂ ಮಣ್ಣಿನದ್ದಾಗಿತ್ತು. ಖರ್ಜೂರದ ಎಲೆಗಳೇ ಅದರ ಮಾಡು. ಅವರು ಲೋಕವಿರಕ್ತ ಸನ್ಯಾಸಿಯಾಗಿರಲಿಲ್ಲ. ತಮ್ಮ ಕಾಲದ ಓರ್ವ ಶಕ್ತಿಶಾಲಿ ಆಡಳಿತ ಗಾರರಾಗಿದ್ದರು. ಅದನ್ನು ಯೋಚಿಸುವಾಗಲೇ ಮನದ ಮೇಲೆ ಒಂದು ವಿಶೇಷ ಪ್ರಭಾವವಾಗುತ್ತದೆ.

ಸದಾ ನಗುಮುಖದಿಂದ ಇರುವವರು. ಕೆರಳುವವರಲ್ಲ. ಸಿಟ್ಟು ಮಾಡುವವರಲ್ಲ. ಅಟ್ಟಹಾಸದ ನಗು ಬೀರುವವರಲ್ಲ. ಎಲ್ಲರಿಗೂ ನೆರವಾಗುವವರು. ಗಾಂಭೀರ್ಯದಿಂದ ನಡೆಯುವವರು. ಯಾರ ಸಲಾಮ್‌ಗಾಗಿಯೂ ನಿರೀಕ್ಷಿಸದೆ ಮುಂದಾಗಿ ಎಲ್ಲರಿಗೂ ಸಲಾಮ್ ಹೇಳುವವರು. ಪೀಡಿತರ, ಮರ್ದಿತರ, ಶೋಷಿತರ ಕರೆಗೆ ಓಗೊಟ್ಟು ನೆರವಿಗೆ ಧಾವಿಸುವವರು. ಇದು ಆ ಪಾವನ ಪ್ರವಾದಿಯ ಮಹಾನ್ ಚಾರಿತ್ರ್ಯವಾಗಿತ್ತು.

ಜೀವನದಾದ್ಯಂತ ಅವರು ಯಾರನ್ನೂ ಗದರಿಸಿರಲಿಲ್ಲ. ಯಾರಿಗೂ ಛೀಮಾರಿ ಹಾಕಿರಲಿಲ್ಲ. ಯಾರನ್ನೂ ಬಯ್ಯಲಿಲ್ಲ.

ಎಷ್ಟೋ ಮಹಾತ್ಮರ ಕತೆ ನಮಗೆ ತಿಳಿದಿದೆ. ಅವರು ಬಾಹ್ಯ ಲೋಕಕ್ಕೆ ಮೃದು ಸ್ವಭಾವದವರು, ತಾಳ್ಮೆ-ಸಂಯಮಗಳ ಸಾಕಾರಮೂರ್ತಿಯಂತೆ ಕಂಡರೂ ಮನೆಯಲ್ಲಿ ತಮ್ಮ ಮಡದಿ ಮಕ್ಕಳೊಂದಿಗೆ, ಆಳುಗಳೊಂದಿಗೆ, ತಮ್ಮ ಅಧೀನವಿರುವವರೊಂದಿಗೆ ದುಃಸ್ವಭಾವ ದವರೂ ಮಾತು ಮಾತಿಗೆ ರೇಗುವವರೂ ಕಠೋರ ಮಾತಿನವರೂ ಆಗಿರುತ್ತಾರೆ.

ಆದರೆ ಪ್ರವಾದಿವರ್ಯರ ಮಹಿಮೆಯೇ ವಿಸ್ಮಯಕರವಾದುದು. ಇತರರೊಂದಿಗೆ ಇದ್ದಂತೆ ತಮ್ಮ ಮನೆಯವರೊಂದಿಗೂ, ಆಳುಗಳೊಂದಿಗೂ, ಅಧೀನದಲ್ಲಿರುವವ ರೊಂದಿಗೂ ಅಷ್ಟೇ ಹಸನ್ಮುಖಿ, ಸುಸ್ವಭಾವಿ ಮತ್ತು ಮೃದುವಾಗಿದ್ದರು.

ಅವರನ್ನು ಭೇಟಿಯಾಗುವವರು ಹಸ್ತಲಾಘವಕ್ಕಾಗಿ ಚಾಚಿದರೆ ಆತನ ಕೈ ಹಿಡಿದೇ ಸಂಭಾಷಣೆಗೈಯುತ್ತಿದ್ದರು. ಭೇಟಿಗೆ ಬಂದ ವ್ಯಕ್ತಿ ತನ್ನ ಕೈ ಹಿಂತೆಗೆದುಕೊಳ್ಳುವ ತನಕ ಕೈ ಹಿಡಿದೇ ಇರುತ್ತಿದ್ದರು. ಸಂಗಾತಿಗಳೊಂದಿಗೆ ನಡೆಯುವಾಗ ಅವರ ಕೈ ಹಿಡಿದೇ ನಡೆಯುತ್ತಿದ್ದರು. ಪ್ರತಿಯೊಬ್ಬನನ್ನೂ ಪ್ರೀತಿ-ಆದರಗಳೊಂದಿಗೆ ಕೂಗಿ ಕರೆಯುತ್ತಿದ್ದರು. ಯಾರಾದರೂ ಅವರೊಂದಿಗೆ ಒರಟಾಗಿ ಮಾತನಾಡಿದರೆ ತಾಳ್ಮೆ ವಹಿಸುತ್ತಿದ್ದರು. ಅವರ ಲಜ್ಜೆಯು ಆದರ್ಶಪ್ರಾಯವಾಗಿತ್ತು. ಓರ್ವ ಕುಲೀನ ಮನೆತನದ ಪಾವನ ಕನ್ಯೆಯ ಲಜ್ಜೆಗಿಂತಲೂ ಅದು ಮಿಗಿಲಾಗಿತ್ತು.

ಇಂತಹ ಮಹಾನ್ ವ್ಯಕ್ತಿಯನ್ನು ತಮ್ಮ ನೇತಾರರಾಗಿ ಮಾಡಿಕೊಂಡ ಅದೃಷ್ಟ ಶಾಲಿಗಳೇ ಮುಸ್ಲಿಮರು. ಪ್ರವಾದಿವರ್ಯರ(ಸ) ಅನುಯಾಯಿಗಳಲ್ಲಿ ಅವರ ಈ ಗುಣಗಳು ಇಂದಿಗೂ ಪ್ರತಿಬಿಂಬಿತವಾಗಿವೆ. ಇವೆಲ್ಲವೂ ಆ ಮಹಾನ್ ಪ್ರವಾದಿಯ ಕೊಡುಗೆಗಳಾಗಿವೆ.

❧•❧

# ಪ್ರವಾದಿವರ್ಯರ(ಸ) ಮೃದುತ್ವ ಮತ್ತು ದೃಢಚಿತ್ತತೆ

ಅನೇಕ ಧಾರ್ಮಿಕ ನಾಯಕರ ಜೀವನದಲ್ಲಿ ಅವರು ದೇವ ಸಹಾಯದಿಂದ ನಿರಾಶರಾಗುವ ಕ್ಷಣಗಳನ್ನು ನಾವು ಕಾಣುತ್ತೇವೆ. ಅವರೆಲ್ಲರೂ ಸಜ್ಜನರೇ ಆಗಿದ್ದರು. ಆದರೆ ಕೆಲವು ಪ್ರತಿಕೂಲ ಸಂದರ್ಭಗಳಲ್ಲಿ ದೇವನು ಅವರನ್ನು ಕೈಬಿಟ್ಟನೋ ಎಂದು ಭಾಸವಾಗುವಂತಹ ಶಬ್ದಗಳೂ ಅವರ ಬಾಯಿಯಿಂದ ಹೊರಡುತ್ತಿದ್ದುವು.

ಆ ಮಹಾತ್ಮರಲ್ಲಿ ಮೃದುತ್ವವೂ ಕಾಣಸಿಗುತ್ತದೆ. ಆದರೆ ಅದರ ಜೊತೆಗೇ ಕಷ್ಟಕರ ಪರಿಸ್ಥಿತಿಯಲ್ಲಿ ತಮ್ಮ ತತ್ವಗಳ ಮೇಲೆ ಅಚಲ ನಿಷ್ಠೆ ಸಾಕಷ್ಟು ಪ್ರಮಾಣದಲ್ಲಿ ಕಾಣಸಿಗುವುದಿಲ್ಲ.

ಪ್ರವಾದಿವರ್ಯರ(ಸ) ಮಹಿಮೆಯನ್ನು ನೋಡಿರಿ. ಅವರು ಸಂಭಾಷಣೆಯ ಕೂಟಗಳಲ್ಲಿ ಎಷ್ಟು ಮೃದುವಾಗಿದ್ದರೋ ಪರಿಶ್ರಮದ ರಂಗದಲ್ಲಿ ಅಷ್ಟೇ ಚುರುಕಾಗಿದ್ದರು. ವಿಪತ್ತು ಸಂಕಷ್ಟಗಳ ವೇಳೆ ಬೆಟ್ಟದಷ್ಟು ಅಚಲವಾದ ನಿಲುಮೆ ವಹಿಸುತ್ತಿದ್ದರು.

ಪ್ರವಾದಿವರ್ಯರ(ಸ) ಏಕ ದೇವೋಪಾಸನೆಯ ಆಹ್ವಾನವನ್ನು ಕೇಳಿ ಕೆರಳಿದ ಜನರ ಒಂದು ನಿಯೋಗವು ಅವರ ಚಿಕ್ಕಪ್ಪ ಅಬೂ ತಾಲಿಬರ ಬಳಿಗೆ ಹೋಗಿ "ನಿಮ್ಮ ಭ್ರಾತೃಜನನ್ನು ಈ ಪ್ರಚಾರ ಕಾರ್ಯದಿಂದ ತಡೆಯಿರಿ. ಇಲ್ಲವೇ ನಮ್ಮ ಮತ್ತು ಅವನ ಮಧ್ಯದಿಂದ ನೀವು ದೂರ ಸರಿಯಿರಿ. ನಾವೇ ಅವನನ್ನು ನೋಡಿಕೊಳ್ಳುವೆವು" ಎಂದು ಎಚ್ಚರಿಕೆ ನೀಡುತ್ತಾರೆ.

ಪರಿಸ್ಥಿತಿಯ ಸಂಕೀರ್ಣತೆಯನ್ನು ಅರಿತು ಅಬೂ ತಾಲಿಬ್ ವ್ಯಾಕುಲ ಚಿತ್ತರಾದರು. ಪ್ರವಾದಿವರ್ಯರನ್ನು(ಸ) ಕರೆಸಿ ಅವರಿಗೆ ಕುರೈಷರ ಉದ್ದೇಶವನ್ನು ತಿಳಿಯಪಡಿಸಿದರು. ಅತ್ಯಂತ ಪ್ರೀತಿಪೂರ್ವಕವಾಗಿ ಈ ಪರಿಸ್ಥಿತಿಯಲ್ಲಿ ಸ್ವಲ್ಪ ಮೃದುವಾಗಬೇಕೆಂಬ ಸಲಹೆಯಿತ್ತರು. ಈ ಸಂದರ್ಭದಲ್ಲಿ ಸತ್ಯಸಂಧರಾದ ಆ ಮಹಾನ್ ಮಾರ್ಗದರ್ಶಿಯವರ ಉತ್ತರವು ಮನುಷ್ಯ ಮೇಲ್ಮೆಯ ಚರಿತ್ರೆಯಲ್ಲೇ ಒಂದು ಅಮೋಘ ಅಧ್ಯಾಯವಾಗಿದೆ. ಅವರು ಹೀಗೆ ಸಾರಿದರು:

"ಈ ಜನರು ನನ್ನ ಒಂದು ಕೈಯಲ್ಲಿ ಸೂರ್ಯನನ್ನು, ಮತ್ತೊಂದು ಕೈಯಲ್ಲಿ ಚಂದ್ರನನ್ನು ತಂದಿಟ್ಟರೂ ನಾನು ನನ್ನ ಈ ಪರಿಶ್ರಮದಿಂದ ಹಿಂಜರಿಯುವವನಲ್ಲ. ನನ್ನ

ಕೊನೆಯುಸಿರಿನ ವರೆಗೂ ನಾನು ಈ ಸಂದೇಶ ಪ್ರಚಾರದಲ್ಲಿ ಯಾವ ಕೊರತೆಯನ್ನೂ ಮಾಡಲಾರೆ."

ವಿರೋಧಿಗಳು ಪ್ರವಾದಿವರ್ಯರನ್ನು(ಸ) ಎಷ್ಟೋ ಪೀಡಿಸಿದರು. ಕಸಕಡ್ಡಿಗಳನ್ನು ಅವರ ಮೈಮೇಲೆ ಎಸೆದರು. ಕಲ್ಲಿನ ಸುರಿಮಳೆಗೆರೆದರು. ನಮಾಝ್ ನಿರ್ವಹಿಸುತ್ತಿದ್ದಾಗ ಅವರ ಮೇಲೆ ಒಂಟೆಯ ಕರುಳನ್ನು ಎತ್ತಿ ತಂದು ಹಾಕಿದರು. ಅವರನ್ನು ಕೊಲೆಗೈಯಲಿಕ್ಕಾಗಿ ಎಲ್ಲ ಗೋತ್ರಗಳ ಒಬ್ಬೊಬ್ಬ ವ್ಯಕ್ತಿ ಖಡ್ಗಧಾರಿಯಾಗಿ ಅವರ ಮನೆಗೆ ಮುತ್ತಿಗೆ ಹಾಕಿದರು.

ಈ ಎಲ್ಲ ಪ್ರತಿಕೂಲ ಪರಿಸ್ಥಿತಿಗಳಲ್ಲೂ ಪ್ರವಾದಿವರ್ಯರ ದೃಢಚಿತ್ತತೆಯಲ್ಲಿ ವೃದ್ಧಿಯೇ ಉಂಟಾಯಿತು. ಅವರ ಕಾಲುಗಳು ಸ್ವಲ್ಪವೂ ಕದಲಲಿಲ್ಲ.

ಯುದ್ಧರಂಗಗಳಿಗೆ ಪ್ರವಾದಿವರ್ಯರನ್ನು(ಸ) ಆಹ್ವಾನಿಸಲಾಯಿತು. ಅಲ್ಲಿ ಇದೇ ಮೃದು ಸ್ವಭಾವದ ಮನುಷ್ಯ ಪೂರ್ಣ ಸ್ಥೈರ್ಯದೊಂದಿಗೆ ಮುಂದುವರಿಯುವುದನ್ನು ನಾವು ಕಾಣುತ್ತೇವೆ. ಕೇವಲ 313 ಮಂದಿ ಪ್ರವಾದಿವರ್ಯರ(ಸ) ಜೊತೆಗಿದ್ದರು. ವಿರೋಧಿಗಳ ಸಂಖ್ಯೆ ಇದಕ್ಕಿಂತ ಎಷ್ಟೋ ಪಟ್ಟು ಅಧಿಕವಾಗಿತ್ತು. ಅತ್ಯಂತ ಶೌರ್ಯ ದೊಂದಿಗೆ ಅವರು ಹೋರಾಡಿ ಜಯಶೀಲರಾದರು.

ರಣಾಂಗಣದಲ್ಲಿ ಪ್ರವಾದಿವರ್ಯರು(ಸ) ಗಾಯಾಳುವೂ ಆದರು. ಅವರ ಕೆನ್ನೆಗೆ ಬಲವಾದ ಪೆಟ್ಟಾಗಿತ್ತು. ಹಲ್ಲುಗಳು ಉದುರಿದ್ದವು. ಒಂದು ಹೊಂಡದಲ್ಲಿಯೂ ಬಿದ್ದಿದ್ದರು. ಆದರೂ ಅವರ ಧೈರ್ಯ ಸ್ಥೈರ್ಯಗಳಿಗೆ ಯಾವ ರೀತಿಯ ಕುಂದೂ ಬರಲಿಲ್ಲ.

ಮದೀನಾಕ್ಕೆ ಮುತ್ತಿಗೆ ಹಾಕಲಾಗಿತ್ತು. ಹಸಿವು, ದಾರಿದ್ರ್ಯ ಮತ್ತು ಬಡತನದ ದಿನಗಳೂ ಬಂದುವು. ಆದರೆ ಯಾವ ಪರಿಸ್ಥಿತಿಯಲ್ಲಿಯೂ ನಿರಾಸೆಯ ಸೋಂಕು ಕೂಡಾ ಅವರಿಗೆ ತಾಗಲಿಲ್ಲ. ಎಲ್ಲ ಪರಿಸ್ಥಿತಿಗಳಲ್ಲೂ ಅತ್ಯಂತ ಆಶಾವಾದಿಯಾಗಿದ್ದರು. ಎಂತಹ ಕಠಿಣ ಪರಿಸ್ಥಿತಿಯಲ್ಲೂ ದೃಢಚಿತ್ತತೆಯ ಸಾಕಾರಮೂರ್ತಿಯಾಗಿದ್ದರು.

ಇದು ಆ ಮಹಾನ್ ಪ್ರವಾದಿಯ ಅವಸ್ಥೆಯಾದರೆ ಅವರ ಅನುಯಾಯಿಗಳ ಸ್ಥಿತಿಯೂ ಇದಕ್ಕಿಂತ ಭಿನ್ನವಾಗಿರಲಿಲ್ಲ. ಅವರು ಎಷ್ಟೋ ಸಂಕಷ್ಟಗಳಿಗೆ ಗುರಿಯಾದರು. ಅವರನ್ನು ಗೇಲಿ ಮಾಡಲಾಯಿತು. ಅವರಿಗೆ ಅಡ್ಡ ಹೆಸರು ಇಡಲಾಯಿತು. ಅವರಿಗೆ ಛಡಿಯೇಟು ನೀಡಲಾಯಿತು. ಉರಿಯುವ ಮರಳಲ್ಲಿ ಅವರನ್ನು ಮಲಗಿಸಲಾಯಿತು. ಆದರೆ ಈ ಎಲ್ಲ ಪರಿಸ್ಥಿತಿಗಳಲ್ಲೂ ಪ್ರವಾದಿವರ್ಯರ ಸಂಗಾತಿಗಳು ಪೂರ್ಣ ಶಕ್ತಿ ಯೊಂದಿಗೆ ಸತ್ಪಥದಲ್ಲಿ ಅಚಲರಾಗಿ ನಿಂತರು.

ಏಕ ದೇವತ್ವ ಮತ್ತು ದೇವನ ಮೇಲೆ ಭರವಸೆಯು ಅವರ ದೃಢ ಚಿತ್ತತೆಯಲ್ಲಿ ವ್ಯಕ್ತವಾಗುತ್ತದೆ. ಅವರು ತಮ್ಮ ಕೊನೆಯುಸಿರಿನ ತನಕ ತಮ್ಮ ತತ್ವಗಳ ಮೇಲೆ ಅಚಲರಾಗಿ ನಿಂತರು. ಪ್ರಾಣ ಹೋದರೂ ಅವರು ತಮ್ಮ ತತ್ವಗಳಿಂದ ವಿಚಲಿತರಾಗಲಿಲ್ಲ.

ಪ್ರವಾದಿವರ್ಯರು(ಸ) ತಮ್ಮ ಸಂಗಾತಿಗಳಿಗೆ ಸೌಜನ್ಯತೆಯನ್ನು ಕಲಿಸುವುದರೊಂದಿಗೆ ತಮ್ಮ ತತ್ವಗಳ ಬಗ್ಗೆ ಅಚಲವಾದ ನಿಲುವು ಸ್ವೀಕರಿಸುವ ಶಿಕ್ಷಣವನ್ನೂ ನೀಡಿದರು. ವಿರೋಧೀ ಗುಂಪಿನ ಕೈಯಿಂದ ಪ್ರವಾದಿವರ್ಯರು(ಸ) ಮತ್ತು ಅವರ ಸಂಗಾತಿಗಳು ಅನೇಕ

ಸಂಕಷ್ಟಗಳನ್ನು ಎದುರಿಸಬೇಕಾಯಿತು. ಆದರೆ ಮಕ್ಕಾ ವಿಜಯದ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ಮತ್ತು ಅವರ ಸಂಗಾತಿಗಳು ಮಕ್ಕಾ ನಗರಕ್ಕೆ ವಿಜಯಿಯಾಗಿ ಪ್ರವೇಶಿಸಿದಾಗ ಅವರಲ್ಲಿ ವಿಜಯದ ಮದವಾಗಲೀ ಪ್ರತೀಕಾರದ ಭಾವನೆಯಾಗಲೀ ಗೋಚರಿಸಲಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಪ್ರವಾದಿವರ್ಯರ(ಸ) ಶಿರವು ವಿನಯದೊಂದಿಗೆ ಬಾಗಿರುವುದನ್ನು ಜಗತ್ತು ಕಂಡಿತು.

"ನಾವು ಇವರ ಮೇಲೆ ಭಯಾನಕ ಅಕ್ರಮಗಳನ್ನು ಎಸಗಿದ್ದೇವೆ. ಇಂದು ನಮ್ಮ ಗತಿ ಏನಾಗುವುದೋ?" ಎಂಬ ಭಯದಿಂದ ಕುರೈಷರು ಕಂಪಿಸುತ್ತಿದ್ದರು.

ಪ್ರವಾದಿವರ್ಯರ(ಸ) ಪ್ರೇಮಭರಿತ ನಾಲಗೆಯಿಂದ ಈ ಶಬ್ದಗಳು ಮುತ್ತುಗಳಂತೆ ಉದುರಿದವು:

"ಜನರೇ! ಈ ದಿನ ನಿಮ್ಮ ಮೇಲೆ ಯಾವ ಪ್ರತೀಕಾರವನ್ನೂ ಎಸಗಲಾಗದು. ಅಲ್ಲಾಹನು ನಿಮ್ಮನ್ನು ಕ್ಷಮಿಸಲಿ. ಅವನು ಪರಮ ದಯಾಳುವೂ ಕರುಣಾನಿಧಿಯೂ ಆಗಿರುವನು. ಈ ದಿನ ನೀವೆಲ್ಲರೂ ಸ್ವತಂತ್ರರು."

ಹುತಾತ್ಮರಾದ ತಮ್ಮ ಚಿಕ್ಕಪ್ಪನ ಕರುಳು ಹೊರ ತೆಗೆದು ಜಗಿದವಳನ್ನೂ ಪ್ರವಾದಿವರ್ಯರು(ಸ) ಕ್ಷಮಿಸಿದರು. ಮಾನವ ಚರಿತ್ರೆಯು ಇಂತಹ ಒಂದು ಉದಾಹರಣೆ ನೀಡಬಲ್ಲುದೇ?

ಎಷ್ಟೊಂದು ಉನ್ನತ ಹಾಗೂ ಉದಾತ್ತವಾದ ವಿಚಾರವಿದು!

# ಪರಿಶುದ್ಧತೆ ಮತ್ತು ನೈರ್ಮಲ್ಯ

ತಿಳುವಳಿಕೆಯಿಲ್ಲದ ಜನರು ಇಸ್ಲಾಮ್ ಮತ್ತು ಮುಸ್ಲಿಮರ ಬಗ್ಗೆ ಅನೇಕ ತಪ್ಪಭಿಪ್ರಾಯಗಳಲ್ಲಿ ಸಿಲುಕಿದ್ದಾರೆ. ಅವುಗಳ ಪೈಕಿ ಒಂದು, ಮುಸ್ಲಿಮರಲ್ಲಿ ನೈರ್ಮಲ್ಯಕ್ಕೆ ಮಹತ್ವವಿಲ್ಲವೆಂಬುದಾಗಿದೆ. ಅತ್ಯಂತ ನೈರ್ಮಲ್ಯದ ಶಿಕ್ಷಣ ನೀಡಿರುವ ಧರ್ಮವಿದ್ದರೆ, ಅದು ಇಸ್ಲಾಮ್ ಮಾತ್ರವೆಂಬುದನ್ನು ಅಂತಹ ಜನರಿಗೆ ನಾನು ತಿಳಿಸಬಯಸುತ್ತೇನೆ. ಪ್ರವಾದಿವರ್ಯರ(ಸ) ಅನುಕರಣೆ ಮಾಡಿ ಬಾಹ್ಯ, ಅಂತರ್ಯಗಳ ನೈರ್ಮಲ್ಯವನ್ನು ಅಳವಡಿಸಿಕೊಂಡರೆ ಇಡೀ ಇಸ್ಲಾಮಿ ಜಗತ್ತು ನೈರ್ಮಲ್ಯದ ಆಗರವಾದೀತು.

ಇಸ್ಲಾಮಿನಲ್ಲಿ 5 ಹೊತ್ತಿನ ನಮಾಝ್ ಕಡ್ಡಾಯವಾಗಿದೆ. ನೈರ್ಮಲ್ಯವಿಲ್ಲದೆ ನಮಾಝ್ ಆಗುವುದೇ ಇಲ್ಲ. ನೈರ್ಮಲ್ಯಕ್ಕೆ ಇಸ್ಲಾಮಿನ ಪಾರಿಭಾಷಿಕದಲ್ಲಿ "ತಹಾರತ್", ಅರ್ಥಾತ್ ಪರಿಶುದ್ಧತೆ ಎನ್ನಲಾಗುತ್ತದೆ. ಪರಿಶುದ್ಧತೆಯ ಮೂರು ವಿಧಗಳಿವೆ. (1) ಶರೀರದ ಪರಿಶುದ್ಧತೆ (2) ಉಡುಪಿನ ಪರಿಶುದ್ಧತೆ (3) ಸ್ಥಳದ ಪರಿಶುದ್ಧತೆ.

ಮಲಮೂತ್ರ ವಿಸರ್ಜನೆಯ ಬಳಿಕ ದೇಹವನ್ನು ಸ್ವಚ್ಛಗೊಳಿಸುವಂತೆ ಈ ಧರ್ಮವು ಆದೇಶಿಸುತ್ತದೆ. ಮಲಮೂತ್ರ ವಿಸರ್ಜನೆಯ ಬಳಿಕ ಶುಚೀಕರಣಕ್ಕಾಗಿ ಮಣ್ಣಿನ ಹೆಂಟೆ ಮತ್ತು ನೀರನ್ನು ಉಪಯೋಗಿಸಬೇಕೆಂದು ವಿಧಿಸಿದೆ.

ರಸ್ತೆ, ಕೆರೆ, ಕೊಳ, ನದಿ, ಮರದ ನೆರಳು, ಈದ್‌ಗಾಹ್, ಮಸೀದಿ, ದಫನ ಭೂಮಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡಬಾರದೆಂದು ಆಜ್ಞಾಪಿಸಿದೆ.

ಅಂತೆಯೇ, ನಿಂತು ಮೂತ್ರ ವಿಸರ್ಜನೆ ಮಾಡುವುದು, ನೀರಿನಲ್ಲಿ ಮಲಮೂತ್ರ ವಿಸರ್ಜನೆ ಮಾಡುವುದು ಮತ್ತು ವಾಹನಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡುವುದನ್ನೂ ನಿಷೇಧಿಸಲಾಗಿದೆ. ಈ ನಿಷೇಧವು ವಿಶೇಷವಾಗಿ ಪರಿಶುದ್ಧತೆ ಮತ್ತು ನೈರ್ಮಲ್ಯದ ದೃಷ್ಟಿಯಿಂದಲೇ ಆಗಿದೆ. ಹಂದಿ ಮತ್ತು ನಾಯಿ ಮುಂತಾದ ಅಶುದ್ಧ ಪ್ರಾಣಿಗಳ ಜೊಲ್ಲು ತಾಗಿದ ಪಾತ್ರೆಗಳನ್ನು ಚೆನ್ನಾಗಿ ತೊಳೆಯಬೇಕೆಂಬ ಆದೇಶದಿಂದಲೂ ಇಸ್ಲಾಮ್ ನೈರ್ಮಲ್ಯಕ್ಕೆ ನೀಡಿರುವ ಮಹತ್ವದ ಅರಿವಾಗುತ್ತದೆ. ಇದೇ ರೀತಿ ಶರೀರ ಮತ್ತು ಬಟ್ಟೆಗೆ ರಕ್ತ, ಕೀವು, ಮಲಮೂತ್ರಗಳು ವಗೈರೆ ತಾಗಿದರೆ ಚೆನ್ನಾಗಿ ತೊಳೆದು ಶುದ್ಧ ಮಾಡಬೇಕು. ಹಸುಳೆಯರು ಶರೀರ ಮತ್ತು ಬಟ್ಟೆಗೆ ಮೂತ್ರ ವಿಸರ್ಜನೆ ಮಾಡಿದರೂ ಅದಕ್ಕೆ ನೀರು ಹಾಕಿ ತೊಳೆಯಬೇಕಾದುದು ಅಗತ್ಯ.

ನಮಾಝ್ ಮಾಡುವ ಸ್ಥಳ, ಚಾಪೆ, ಧರಿಸಿದ ಉಡುಪು ಮತ್ತು ಶರೀರ ಶುದ್ಧವಾಗಿರಬೇಕೆಂಬುದು ನಮಾಝ್‌ನ ವಿಧಿಗಳಲ್ಲಿ ಸೇರಿದೆ. ನಮಾಝ್ ಮಾಡುವ ಮೊದಲು ವುಝೂ (ಅಂಗ ಸ್ನಾನ) ಮಾಡುವುದೂ ಕಡ್ಡಾಯ. ಸ್ನಾನದ ಅಗತ್ಯವಿದ್ದರೆ ಸ್ನಾನ ಮಾಡುವುದೂ ಕಡ್ಡಾಯವಾಗಿದೆ.

ಸ್ನಾನದಲ್ಲಿ ಬಾಯಿ ಮುಕ್ಕಳಿಸುವುದು, ಮೂಗಿನ ರಂಧ್ರಗಳನ್ನು ತೊಳೆಯುವುದು ಮತ್ತು ಪೂರ್ಣ ಶರೀರವನ್ನು ತೊಳೆಯುವುದು ಕಡ್ಡಾಯವಾಗಿದೆ.

ಅಂಗಸ್ನಾನದಲ್ಲಿಯೂ ಬಾಯಿ ಮುಕ್ಕಳಿಸುವುದು ಮತ್ತು ಮೂಗಿನ ರಂಧ್ರಗಳನ್ನು ತೊಳೆಯುವುದು ಸೇರಿವೆ. ಮುಖ ಮತ್ತು ಕೈಕಾಲುಗಳನ್ನೂ ತೊಳೆಯಲಾಗುತ್ತದೆ. ಇವೆಲ್ಲವೂ ಮೂರು ಮೂರು ಬಾರಿ ಮಾಡಲಾಗುತ್ತದೆ. ತಲೆ ಮತ್ತು ಕಿವಿಗಳನ್ನೂ ಒದ್ದೆ ಕೈಗಳಿಂದ ಸವರಲಾಗುತ್ತದೆ. ಹಲ್ಲುಜ್ಜುವುದಕ್ಕೂ ವಿಶೇಷ ಮಹತ್ವವಿದೆ. ಅದನ್ನೂ ಬಹಳ ಒತ್ತು ಕೊಟ್ಟು ಆದೇಶಿಸಲಾಗಿದೆ.

ನಮಾಝ್‌ಗಾಗಿ ಪ್ರತಿದಿನ ಐದು ಬಾರಿ ಈ ಅಂಗಸ್ನಾನ ಮಾಡಬೇಕಾಗುತ್ತದೆ. ಇಸ್ಲಾಮಿನಲ್ಲಿ ಸ್ವಚ್ಛತೆಗೆ ಎಷ್ಟು ಮಹತ್ವ ಕಲ್ಪಿಸಲಾಗಿದೆಯೆಂದು ಇದರಿಂದ ವ್ಯಕ್ತವಾಗಬಹುದು.

ಪ್ರವಾದಿವರ್ಯರು(ಸ) ಸ್ವಯಂ ನೈರ್ಮಲ್ಯವನ್ನು ಅತ್ಯಧಿಕ ಪಾಲಿಸುತ್ತಿದ್ದರು. ಹಲ್ಲುಜ್ಜುವ ಬ್ರಶ್ ಸದಾ ಅವರ ಬಳಿ ಇರುತ್ತಿತ್ತು. ಎಲ್ಲ ಕಡೆ ಉಗುಳುವುದನ್ನು ಅವರು ಇಷ್ಟಪಡುತ್ತಿರಲಿಲ್ಲ. ಸಲ್ಲದ ಸ್ಥಳಗಳಲ್ಲಿ ಯಾರಾದರೂ ಉಗುಳಿದರೆ ಪ್ರವಾದಿವರ್ಯರು ಮುಂದಾಗಿ ಅದನ್ನು ತೊಳೆದು ಶುಚಿಗೊಳಿಸುತ್ತಿದ್ದರು. ತಮ್ಮ ನಿವಾಸವನ್ನವರು ಕನ್ನಡಿಯಂತೆ ಶುಭ್ರವಾಗಿರಿಸುತ್ತಿದ್ದರು. ಅವರ ಉಡುಪು ಸರಳವಾಗಿತ್ತು. ನೈರ್ಮಲ್ಯವು ಸತ್ಯವಿಶ್ವಾಸದ ಅರ್ಧಾಂಶವೆಂದು ಅವರು ಸಾರಿದ್ದರು.

# ಇಸ್ಲಾಮಿನಲ್ಲಿ ಮಹಿಳೆಯ ಸ್ಥಾನ

ಇಸ್ಲಾಮ್ ಮತ್ತು ಮುಸ್ಲಿಮರ ಬಗೆಗಿರುವ ತಪ್ಪು ತಿಳುವಳಿಕೆಗಳಲ್ಲಿ ಕೆಲವು ಮಹಿಳೆಯರಿಗೆ ಸಂಬಂಧಿಸಿವೆ.

ಇಸ್ಲಾಮಿಗಿಂತ ಮೊದಲು ಸಾಮಾನ್ಯವಾಗಿ ಎಲ್ಲ ಸಮುದಾಯ ಮತ್ತು ಸಮಾಜ ಗಳಲ್ಲಿಯೂ ಮಹಿಳೆಯನ್ನು ನಿಕೃಷ್ಟವಾಗಿ ಕಾಣಲಾಗುತ್ತಿತ್ತು. ಅವಳನ್ನು ಅಪಮಾನಿಸ ಲಾಗುತ್ತಿತ್ತು ಮತ್ತು ಅವಳ ಮೇಲೆ ತರತರದ ದೌರ್ಜನ್ಯ ನಡೆಸಲಾಗುತ್ತಿತ್ತು.

❖ ಭಾರತೀಯ ಸಮಾಜದಲ್ಲಿ ಗಂಡ ಸತ್ತ ಕೂಡಲೇ ಆತನ ಚಿತೆಗೆ ಹಾರಿ ಹೆಂಡತಿಯೂ ಪ್ರಾಣ ಬಿಡಬೇಕಾಗುತ್ತಿತ್ತು.

❖ ಚೀನಾದಲ್ಲಿ ಸ್ತ್ರೀಯರಿಗೆ ಕಬ್ಬಿಣದ ಬಿಗಿಯಾದ ಪಾದರಕ್ಷೆ ತೊಡಿಸಲಾಗುತ್ತಿತ್ತು.

❖ ಅರೇಬಿಯಾದಲ್ಲಿ ಹುಡುಗಿಯರನ್ನು ಜೀವಂತ ಹೂಳಲಾಗುತ್ತಿತ್ತು.

ಈ ಅನ್ಯಾಯಗಳ ವಿರುದ್ಧ ಸ್ವರವೆತ್ತುವವರು ತೀರಾ ಇತ್ತೀಚೆಗೆ ಉಂಟಾದರೆಂಬುದಕ್ಕೆ ಇತಿಹಾಸ ಸಾಕ್ಷಿಯಾಗಿದೆ. ಆದರೆ ಈ ಎಲ್ಲಾ ಸುಧಾರಕರಿಗಿಂತ ಅನೇಕ ಶತಮಾನಗಳ ಹಿಂದೆಯೇ ಅರೇಬಿಯಾದಲ್ಲಿ ಪ್ರವಾದಿವರ್ಯರು(ಸ) ಈ ಅಬಲೆಯರ ಸಂರಕ್ಷಕನೆಂಬ ನೆಲೆಯಲ್ಲಿ ಗೋಚರಿಸುತ್ತಾರೆ. ಅವರು ಅಬಲೆಯರ ಮೇಲೆ ಆಗುತ್ತಿರುವ ಅತ್ಯಾಚಾರ ಗಳನ್ನು ಕೊನೆಗಾಣಿಸಿದರು.

ಮಹಿಳೆಯ ಹಕ್ಕಿನ ಬಗ್ಗೆ ತೀರಾ ಅಜ್ಞರಾಗಿದ್ದ ಅರಬ್ ಜನಾಂಗದಲ್ಲಿ ಪ್ರವಾದಿ ವರ್ಯರು(ಸ) ಆಕೆಗೆ ಪುರುಷನಿಗೆ ಸಮಾನವಾದ ಸ್ಥಾನಮಾನ ನೀಡಿದರು. ಆಸ್ತಿಯಲ್ಲಿ ಆಕೆಗೆ ಹಕ್ಕೇ ಇರಲಿಲ್ಲ. ಪ್ರವಾದಿವರ್ಯರು(ಸ) ಆಕೆಗೆ ವಾರೀಸು ಹಕ್ಕನ್ನೂ ನಿರ್ಣಯಿ ಸಿದರು. ಸ್ತ್ರೀಯ ಹಕ್ಕುಗಳ ವಿವರಣೆಗಾಗಿ ಪವಿತ್ರ ಕುರ್‌ಆನಿನಲ್ಲಿ ಅನೇಕ ಆಜ್ಞೆಗಳು ಅವತೀರ್ಣಗೊಂಡವು.

ಮಾತಾಪಿತರು ಮತ್ತಿತರ ಸಂಬಂಧಿಕರ ಆಸ್ತಿಯಲ್ಲಿ ಸ್ತ್ರೀಯರನ್ನು ವಾರೀಸುದಾರ ರೆಂದು ಪರಿಗಣಿಸಲಾಯಿತು. ಇಂದು ನಾಗರಿಕತೆಯ ಡಂಗುರ ಸಾರುತ್ತಿರುವ ಹಲವು ರಾಷ್ಟ್ರಗಳಲ್ಲಿ ಮಹಿಳೆಯರಿಗೆ ಆಸ್ತಿಯ ಹಕ್ಕಾಗಲಿ, ಮತದಾನದ ಹಕ್ಕಾಗಲಿ ಇಲ್ಲ. ಬ್ರಿಟನ್‌ನಲ್ಲಿ ಮಹಿಳೆಯರಿಗೆ ಮತದಾನದ ಹಕ್ಕು ಪ್ರಪ್ರಥಮವಾಗಿ ದೊರೆತುದು 1938ರಲ್ಲಿ. ಭಾರತೀಯ ಸಮಾಜದಲ್ಲಿ ಮಹಿಳೆಗೆ ಆಸ್ತಿಯ ಹಕ್ಕು ದೊರಕಿದ್ದೂ ತೀರಾ ಇತ್ತೀಚೆಗೆ.

ಆದರೆ 14 ಶತಮಾನಗಳ ಹಿಂದೆಯೇ ಈ ಎಲ್ಲ ಹಕ್ಕುಗಳನ್ನೂ ಸ್ತ್ರೀಯರು ಅನುಭವಿಸುತ್ತಿದ್ದುದನ್ನು ನಾವು ಕಾಣುತ್ತೇವೆ. ಅವರಿಗೆ ಆ ಹಕ್ಕನ್ನು ಕೊಡಮಾಡಿದ ಪ್ರವಾದಿ ವರ್ಯರು(ಸ) ಎಷ್ಟು ದೊಡ್ಡ ಅನುಗ್ರಹಿ!

ಪ್ರವಾದಿವರ್ಯರ(ಸ) ಶಿಕ್ಷಣದಲ್ಲಿ ಸ್ತ್ರೀಯರ ಹಕ್ಕಿಗೆ ಬಹಳ ಮಹತ್ವ ನೀಡಲಾಗಿದೆ. ಜನರು ಸ್ತ್ರೀಯರ ಬಗೆಗಿನ ತಮ್ಮ ಕರ್ತವ್ಯದಿಂದ ವಿಮುಖರಾಗಬಾರದೆಂದು ಅವರು ತಾಕೀತು ಮಾಡಿದ್ದರು. ಅವರ ಎಲ್ಲ ನ್ಯಾಯಸಮ್ಮತ ಹಕ್ಕುಗಳನ್ನು ಅವರಿಗೆ ನೀಡ ಬೇಕೆಂದೂ ಅವರಿಗೆ ಹೊಡೆಯಬಾರದೆಂದೂ ಪ್ರವಾದಿವರ್ಯರು(ಸ) ಉಪದೇಶಿಸಿದರು.

ಮಹಿಳೆಯರೊಂದಿಗೆ ಯಾವ ರೀತಿ ವರ್ತಿಸಬೇಕೆಂಬ ಬಗ್ಗೆ ಪ್ರವಾದಿವರ್ಯರ(ಸ) ಆದೇಶಗಳು ಈ ಕೆಳಗಿನಂತಿವೆ.

1. ತನ್ನ ಮಡದಿಯನ್ನು ಹೊಡೆಯುವವನು ಉತ್ತಮ ಶೀಲದವನಲ್ಲ.

2. ತನ್ನ ಪತ್ನಿಯೊಂದಿಗೆ ಉತ್ತಮ ರೀತಿಯಲ್ಲಿ ವ್ಯವಹರಿಸುವವನೇ ನಿಮ್ಮ ಪೈಕಿ ಅತ್ಯುತ್ತಮನು.

3. ಮಹಿಳೆಯರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಲು ದೇವನು ಆಜ್ಞಾಪಿಸಿ ರುವನು. ಏಕೆಂದರೆ ಅವರು ನಿಮ್ಮ ತಾಯಂದಿರು, ಸಹೋದರಿಯರು ಮತ್ತು ಪುತ್ರಿಯರು.

4. ತಾಯಿಯ ಪಾದಗಳಡಿಯಲ್ಲಿ ಸ್ವರ್ಗವಿದೆ.

5. ಯಾವ ಮುಸ್ಲಿಮನೂ ತನ್ನ ಹೆಂಡತಿಯನ್ನು ದ್ವೇಷಿಸಬಾರದು. ಅವಳಲ್ಲಿ ಯಾವುದಾದರೂ ಒಂದು ದುರ್ಗುಣವಿದ್ದರೆ ಅದನ್ನು ಬಿಟ್ಟು ಆಕೆಯ ಇತರ ಒಳ್ಳೆಯ ಗುಣಗಳನ್ನು ನೋಡಿ ಅವನು ಸಂತುಷ್ಟನಾಗಬೇಕು.

6. ನಿಮ್ಮ ಪತ್ನಿಯರೊಂದಿಗೆ ದಾಸಿಯರಂತೆ ವರ್ತಿಸಬೇಡಿ. ಅವರನ್ನು ಹೊಡೆಯಬೇಡಿ.

7. ನೀವು ಉಣ್ಣುವಾಗ ನಿಮ್ಮ ಪತ್ನಿಯರಿಗೂ ಉಣ್ಣಿಸಿ.

8. ಪತ್ನಿಯನ್ನು ಮೂದಲಿಸದಿರಿ. ಮುಖಕ್ಕೆ ಹೊಡೆಯಬೇಡಿರಿ. ಆಕೆಯ ಮನ ನೋಯಿಸಬೇಡಿರಿ. ಅವಳ ಕೈ ಬಿಡಬೇಡಿರಿ.

9. ಪತ್ನಿ ತನ್ನ ಪತಿಯ ಸ್ಥಾನದಲ್ಲಿ ಎಲ್ಲ ಅಧಿಕಾರಗಳನ್ನು ಹೊಂದಿದ ರಾಣಿ ಯಾಗಿರುವಳು.

ಇಷ್ಟು ಹಕ್ಕುಗಳನ್ನು ನೀಡಿ ಮಹಿಳೆಯರನ್ನು ಸ್ವತಂತ್ರರಾಗಿ ಬಿಡಲಿಲ್ಲ. ಅವರಿಗೆ ಕೆಲವು ಮೇರೆಗಳನ್ನು ಪಾಲಿಸಲು ಆಜ್ಞಾಪಿಸಲಾಗಿದೆ.

1. ಪತಿಯು ಅವಳತ್ತ ನೋಡಿದಾಗ ಸಂತುಷ್ಟನಾಗಬೇಕು. ಅವನು ಆಜ್ಞಾಪಿಸಿದಾಗ ಅದನ್ನು ಪಾಲಿಸಬೇಕು. ಪತಿ ಮನೆಯಿಂದ ದೂರವಿರುವಾಗ ಅವನ ಸೊತ್ತನ್ನೂ ತನ್ನ ಮಾನವನ್ನೂ ರಕ್ಷಿಸಿಕೊಳ್ಳಬೇಕು. ಇಂತಹ ಪತ್ನಿ ಮಾತ್ರ ಮಾದರಿ ಪತ್ನಿ ಎನಿಸುವಳು.

2. ಉತ್ತಮ ಗುಣ ನಡತೆಯ ಪತ್ನಿ ದೊರಕಿದರೆ ಅತುಲ್ಯ ಸಂಪತ್ತು ದೊರಕಿದಂತೆ.

3. ಯಾವಳು ದಿನಕ್ಕೆ ಐದು ಬಾರಿ ನಮಾಝ್ ನಿರ್ವಹಿಸಿದಳೋ, ರಮಝಾನಿನ ಉಪವಾಸ ವ್ರತ ಆಚರಿಸಿದಳೋ, ತನ್ನ ಪತಿಯನ್ನು ಅನುಸರಿಸಿದಳೋ ಹಾಗೂ ತನ್ನ

ಮಾನವನ್ನು ರಕ್ಷಿಸಿಕೊಂಡಳೋ ಅಂತಹ ಮಹಿಳೆ ಯಾವ ದ್ವಾರದಿಂದ ಬೇಕಾದರೂ ಸ್ವರ್ಗವನ್ನು ಪ್ರವೇಶಿಸುವಳು.

4. ಲೋಕದ ಎಲ್ಲ ಸಂಪತ್ತಿಗಿಂತ ಮಿಗಿಲಾದ ವಸ್ತು ಮಾನಿನಿಯಾದ ಪತ್ನಿ.

ಈ ರೀತಿ ಪ್ರವಾದಿವರ್ಯರು(ಸ) ಮಹಿಳೆಗೆ ಹಕ್ಕುಗಳನ್ನು ನೀಡಿದರು ಮತ್ತು ಆಕೆಯ ಕರ್ತವ್ಯಗಳನ್ನು ನಿಶ್ಚಯಿಸಿದರು.

ಮಹಿಳೆಗೆ ಇಷ್ಟೆಲ್ಲಾ ಹಕ್ಕುಗಳನ್ನು ನೀಡಿದ ಇಸ್ಲಾಮಿನಲ್ಲಿ ಬಹುಪತ್ನಿತ್ವಕ್ಕೆ ಯಾಕೆ ಅನುಮತಿ ನೀಡಲಾಗಿದೆ ಎಂದು ಯಾರಾದರೂ ಆಕ್ಷೇಪಿಸಬಹುದು. ಇದು ಮಹಿಳೆಯರ ಮೇಲೆ ಅನ್ಯಾಯವಲ್ಲವೇ? ಎಂದು ಪ್ರಶ್ನಿಸಬಹುದು.

ಈ ಬಗ್ಗೆ ನಾವು ಇತಿಹಾಸ, ಪುರುಷನ ಪ್ರಕೃತಿ ಮತ್ತು ಜೀವನದ ವ್ಯಾವಹಾರಿಕ ಸಮಸ್ಯೆಗಳ ಬಗ್ಗೆ ವಿವೇಚಿಸಬೇಕಾಗಿದೆ.

ಭಾರತದ ಓರ್ವ ರಾಜ ದಶರಥನಿಗೆ ಅನೇಕ ಪತ್ನಿಯರಿದ್ದರು. ಹಾಗೆಯೇ ಶ್ರೀ ಕೃಷ್ಣನನ್ನು ನಾವು ರುಕ್ಮಿಣಿ, ಸತ್ಯಭಾಮೆ ಮತ್ತು ರಾಧಾರ ಹೊರತು ಅನೇಕ ಗೋಪಿಕೆಯರ ಮಧ್ಯೆ ಕಾಣುತ್ತೇವೆ.

ವಲ್ಲಿ ಸ್ತ್ರೀಯರೊಂದಿಗೆ ಮುರುಗನ್‌ನಂಥ ದೇವತೆ ರತಿಕ್ರೀಡೆ ನಡೆಸುವುದನ್ನು ನಾವು ಕಾಣುತ್ತೇವೆ. ಇದು ಪ್ರಾಚೀನ ಪುರಾಣಗಳ ವಿಷಯವಾಯಿತು. ಇನ್ನು ಐತಿಹಾಸಿಕ ಘಟನೆಗಳನ್ನು ನೋಡಿರಿ. ದೊಡ್ಡ ದೊಡ್ಡ ರಾಜರಿಗೆ ಒಂದಕ್ಕಿಂತ ಹೆಚ್ಚು ಪತ್ನಿಯರಿದ್ದರು.

ತಮಿಳ್ನಾಡಿನ ಕಟ್ಟಬೊಮ್ಮನರ ಮನೆಯಲ್ಲಿ ಅನೇಕ ಮಡದಿಯರಿದ್ದರು.

ಇಂದಿಗೂ ಕೆಲವು ರಾಜಕಾರಣಿಗಳು ಅನೇಕ ಪತ್ನಿಯರನ್ನು ಹೊಂದಿರುತ್ತಾರೆ.

ಪ್ರವಾದಿ ಮುಹಮ್ಮದ್‌ರ ಆಗಮನಕ್ಕೆ ಮೊದಲು ಅರೇಬಿಯಾದಲ್ಲಿ ಪತ್ನಿಯರ ಸಂಖ್ಯೆಗೆ ಯಾವುದೇ ಮಿತಿಯಿರಲಿಲ್ಲ. ಪ್ರವಾದಿವರ್ಯರು(ಸ) ಪುರುಷರ ಮನಃಶಾಸ್ತ್ರ ಮತ್ತು ವ್ಯಾವಹಾರಿಕ ಅಗತ್ಯಗಳನ್ನು ಪರಿಗಣಿಸಿ ಅದಕ್ಕೆ ನಾಲ್ಕರ ಗರಿಷ್ಠ ಮಿತಿಯನ್ನು ಹೇರಿದರು.

ಮೊದಲು ಅರೇಬಿಯಾದಲ್ಲಿ ಮದುವೆಯ ಯಾವುದೇ ವಿಶಿಷ್ಟ ಪದ್ಧತಿಯಿರಲಿಲ್ಲ. ಗುಂಪುಗುಂಪಾಗಿ ದಾಸಿಯರನ್ನೂ ಪತ್ನಿಯರನ್ನೂ ಹೊಂದಿಕೊಳ್ಳುವ ಪದ್ಧತಿ ಸಾಮಾನ್ಯವಾಗಿತ್ತು. ಅಂತೆಯೇ ವಿವಾಹ ವಿಚ್ಛೇದನಕ್ಕೂ ಯಾವುದೇ ಮಿತಿಯಿರಲಿಲ್ಲ. ಯಾರು ಯಾವಾಗ ಬಯಸಿದರೂ ವಿವಾಹ ವಿಚ್ಛೇದನ ಮಾಡಬಹುದಾಗಿತ್ತು. ಈ ಪರಿಸ್ಥಿತಿಯ ಸುಧಾರಣೆಗಾಗಿ ದೇವನ ಆಜ್ಞೆಗಳು ಅವತೀರ್ಣಗೊಂಡುವು. ಪರಿಮಿತ ಸಂಖ್ಯೆಯಲ್ಲಿ ವಿವಾಹದ ಅನುಮತಿ ನೀಡಲಾಯಿತು ಮತ್ತು ವಿಚ್ಛೇದನದ ವಿಷಯದಲ್ಲಿ ಕೆಲವು ಕಟ್ಟುನಿಟ್ಟುಗಳನ್ನು ಮತ್ತು ವ್ಯವಸ್ಥೆಯನ್ನು ಪಾಲಿಸಲು ಆದೇಶ ನೀಡಲಾಯಿತು. ಕುರ್‌ಆನಿನಲ್ಲಿ ಈ ರೀತಿ ಹೇಳಲಾಯಿತು:

**"ವಿವಾಹ ಮಾಡದೆ ಅನಾಥ ಬಾಲಕಿಯರ ಸಂರಕ್ಷಣೆ ಸಾಧ್ಯವಾಗದು ಎಂದು ನಿಮಗೆ ಭೀತಿಯಿದ್ದರೆ ನಿಮ್ಮಿಷ್ಟ ಬಂದ ಇಬ್ಬರು, ಮೂವರು ಅಥವಾ ನಾಲ್ವರು ಸ್ತ್ರೀಯರನ್ನು**

ಮದುವೆ ಮಾಡಿಕೊಳ್ಳಬಹುದು. (ಅವರೊಳಗೆ ನ್ಯಾಯ ಪಾಲಿಸುವುದು ಅಸಾಧ್ಯವೆಂದು ನಿಮಗೆ ಭೀತಿಯಿದ್ದರೆ) ಒಂದೇ ಸ್ತ್ರೀ ಅಥವಾ ದಾಸಿಯಲ್ಲಿ ಸಂತೃಪ್ತರಾಗಿರಿ. ಅನ್ಯಾಯವೆಸಗುವುದರಿಂದ ತಡೆದು ನಿಲ್ಲಲು ಇದು ಸುಲಭದ ಹಾದಿ." (ಅನ್ನಿಸಾ 3)

ಈ ಆಜ್ಞೆಯಲ್ಲಿ ಅಡಗಿರುವ ಯುಕ್ತಿಗಳ ಬಗ್ಗೆ ಯೋಚಿಸಿರಿ. ನ್ಯಾಯ, ಸಮಾನತೆ ಮತ್ತು ಸತ್ಯದೊಂದಿಗೆ ವಿವಾಹಿತ ಸ್ತ್ರೀಯರೊಂದಿಗೆ ವರ್ತಿಸಿರಿ. ಬಹುಪತ್ನಿತ್ವದ ಅನುಮತಿಯೂ ಇದೆ; ಜೊತೆಗೆ ನ್ಯಾಯ ಪಾಲಿಸುವ ಕಟ್ಟಾಜ್ಞೆಯೂ ಇದೆ. ನ್ಯಾಯ ಪಾಲಿಸುವುದು ಸಾಧ್ಯವಾಗದಿದ್ದರೆ ಒಂದೇ ವಿವಾಹ ಮಾಡಬೇಕೆಂದು ಆಜ್ಞಾಪಿಸಲಾಗಿದೆ.

ಪುರುಷನಿಗೆ ಯಾವ ಸಮಯದಲ್ಲೂ ತನ್ನ ವಿಷಯಾಸಕ್ತಿಯ ದಾಹವನ್ನು ತೀರಿಸುವ ಅಗತ್ಯ ಬೀಳಬಹುದು. ಏಕೆಂದರೆ ಪ್ರಕೃತಿಯು ಅವನನ್ನು ಎಲ್ಲ ಪರಿಸ್ಥಿತಿಯಲ್ಲೂ ಯಾವಾಗಲೂ ವಿಷಯಾಸಕ್ತಿ ತೀರಿಸಲು ಯೋಗ್ಯವಾಗಿ ಮಾಡಿದೆ. ಆದರೆ ಸ್ತ್ರೀಯರ ಪರಿಸ್ಥಿತಿ ಇದಕ್ಕೆ ವ್ಯತಿರಿಕ್ತವಾಗಿದೆ.

ಋತುಸ್ರಾವದ ಸಮಯದಲ್ಲಿ, ಗರ್ಭಿಣಿಯಾದಾಗ ಮತ್ತು ಹೆರಿಗೆಯ ಬಳಿಕ ಕೆಲವು ತಿಂಗಳು ತನ್ನ ಪತಿಯ ವಿಷಯಾಸಕ್ತಿಯನ್ನು ಶಮನಗೊಳಿಸಲು ಆಕೆ ಸಮರ್ಥಳಾಗಿರುವುದಿಲ್ಲ.

ಎಲ್ಲ ಪುರುಷರೂ ತಾಳ್ಮೆ ಮತ್ತು ಸಂಯಮದಿಂದಿದ್ದು ತಮ್ಮ ಪತ್ನಿಯರು ಅವರನ್ನು ಸಮೀಪಿಸುವ ಸ್ಥಿತಿಗೆ ತಲುಪುವ ತನಕ ತಮ್ಮ ವಿಷಯಾಸಕ್ತಿಯನ್ನು ನಿಯಂತ್ರಣದಲ್ಲಿಡಬಲ್ಲರೆಂದು ನಿರೀಕ್ಷಿಸುವುದು ಸರಿಯಲ್ಲ. ಇಂತಹ ಸಂದರ್ಭಗಳಲ್ಲಿ ನ್ಯಾಯ ಸಮ್ಮತ ರೀತಿಯಲ್ಲಿ ಅವರು ತಮ್ಮ ಬಯಕೆಯನ್ನು ಈಡೇರಿಸಿಕೊಳ್ಳುವ ಮಾರ್ಗವು ಇರಬೇಕು. ಅವರನ್ನು ತಮ್ಮ ಬಯಕೆಯ ಈಡೇರಿಕೆಗಾಗಿ ವಾಮ ಮಾರ್ಗಗಳನ್ನು ಅನುಸರಿಸಲು ನಿರ್ಬಂಧಿಸುವಷ್ಟು ಬಿಗು ನೀತಿ ಸಲ್ಲದು. ಹೆಸರಿಗೆ ಮಾತ್ರ ಒಬ್ಬಳು ಪತ್ನಿ, ಬಯಕೆ ತೀರಿಸಲು ಸಂಪರ್ಕಿಸುವ ಸ್ತ್ರೀಯರಿಗೆ ಮಿತಿಯಿಲ್ಲದಂತೆ ಆಗಬಾರದು. ಇದರಿಂದ ಸಮಾಜದಲ್ಲಿ ಯಾವ ರೀತಿ ಅಶ್ಲೀಲತೆ ಹರಡುತ್ತದೆ ಮತ್ತು ಸದ್ಗುಣ ಶೀಲಗಳು ಯಾವ ರೀತಿ ನಾಶ ಹೊಂದುವುದು ಎಂಬುದನ್ನು ಊಹಿಸಲು ಕಷ್ಟವಾಗದು.

ವ್ಯಭಿಚಾರ ಮತ್ತು ಅಕ್ರಮ ಕಾಮ ವ್ಯವಹಾರಗಳನ್ನು ನಿಷೇಧಿಸಿ, ಬಹುಪತ್ನಿತ್ವದ ಅನುಮತಿ ನೀಡಿದ ಯುಕ್ತಿಪೂರ್ಣವಾದ ಧರ್ಮ ಇಸ್ಲಾಮ್ ಮಾತ್ರವಾಗಿದೆ.

ಒಂದಕ್ಕಿಂತ ಹೆಚ್ಚು ವಿವಾಹವಾಗುವ ಶರ್ತಬದ್ಧ ಅನುಮತಿ ನೀಡಿ ವಾಸ್ತವದಲ್ಲಿ ಇಸ್ಲಾಮ್ ಧರ್ಮವು ಸ್ತ್ರೀ-ಪುರುಷರ ಅಂಗ ರಚನೆ, ಅವರ ಮನಃಶಾಸ್ತ್ರ ಮತ್ತು ನೈಜ ಬಯಕೆ ಬೇಡಿಕೆಗಳನ್ನು ಪೂರ್ಣವಾಗಿಯೂ ಪರಿಗಣಿಸಿದೆ. ಈ ರೀತಿ ನಮ್ಮ ದೃಷ್ಟಿಯಲ್ಲಿ ಇಸ್ಲಾಮ್ ಒಂದು ನೈಜ ವೈಜ್ಞಾನಿಕ ಧರ್ಮವೆಂದು ರುಜುವಾಗುತ್ತದೆ.

# ಇಸ್ಲಾಮ್ ಖಡ್ಗದಿಂದ ವ್ಯಾಪಿಸಿತೇ?

ಇಸ್ಲಾಮ್ ಖಡ್ಗದಿಂದ ವ್ಯಾಪಿಸಿತೆಂಬುದು ಒಂದು ಮಿಥ್ಯ ವಾದ. ಅದು ಸಂಪೂರ್ಣ ತಪ್ಪು ತಿಳುವಳಿಕೆಯ ಆಧಾರದ ಮೇಲೆ ನಿಂತಿದೆ. ಈ ಬಗ್ಗೆ ವಾಸ್ತವಿಕತೆಯೇನೆಂದರಿತು ಒಂದು ಸೂಕ್ತ ನಿರ್ಧಾರಕ್ಕೆ ಬರಲು ಪ್ರಯತ್ನಿಸೋಣ.

ಕ್ರೈಸ್ತ ಧರ್ಮ ಮತ್ತು ಇಸ್ಲಾಮ್ ಪ್ರಥಮ ಘಟ್ಟದಲ್ಲಿ ಕೇವಲ ಗುಪ್ತ ರೀತಿಯ ಧರ್ಮ ಪ್ರಚಾರದ ಕಾರ್ಯಗಳಿಂದಲೇ ಪಸರಿಸಿತು.

ಹ. ಈಸಾ(ಏಸುಕ್ರಿಸ್ತ)ರ ಬಳಿಕ ಅವರ ಅನುಯಾಯಿಗಳು ಆ ಧರ್ಮದ ಪ್ರಚಾರ ಕಾರ್ಯ ನಿರ್ವಹಿಸಿದರು.

ಇಸ್ಲಾಮ್ ಧರ್ಮದ ಪ್ರಚಾರವು ಕೇವಲ ಕೆಲವೇ ಕಾಲ ಗುಪ್ತವಾಗಿ ನಡೆಯಿತು. ತರುವಾಯ ಅದರ ಸಂದೇಶವನ್ನು ಬಹಿರಂಗವಾಗಿ ಪ್ರಚಾರ ಮಾಡಬೇಕೆಂದು ಆದೇಶ ಬಂತು.

ಇಸ್ಲಾಮಿನಲ್ಲಿ ಯಾವುದೇ ಒತ್ತಡ ಬಲಾತ್ಕಾರವಿಲ್ಲವೆಂದು ವ್ಯಕ್ತವಾಗಿ ಸಾರಲಾಗಿತ್ತು. ಪವಿತ್ರ ಕುರ್‌ಆನ್ ಈ ರೀತಿ ಸಾರುತ್ತದೆ: "ಧರ್ಮದ ವಿಷಯದಲ್ಲಿ ಯಾವುದೇ ಬಲಾತ್ಕಾರವಿಲ್ಲ." ಹಾಗಾದರೆ ಪ್ರವಾದಿವರ್ಯರು(ಸ) ಯುದ್ಧಗಳನ್ನೇಕೆ ಮಾಡಿದರು? ಅವರು ಖಡ್ಗಧಾರಿಯಾಗುವ ಅಗತ್ಯವೇನಿತ್ತು? ಎಂದು ಯಾರಾದರೂ ಕೇಳಬಹುದು. ವಾಸ್ತವದಲ್ಲಿ ಪ್ರವಾದಿವರ್ಯರ(ಸ) ಯುದ್ಧಗಳನ್ನು ಆಕ್ರಮಣಕಾರಿ ಯುದ್ಧಗಳೆಂದು ಹೇಳಲಾಗದು. ಅವರ ಎಲ್ಲ ಯುದ್ಧಗಳೂ ರಕ್ಷಣಾತ್ಮಕವಾಗಿದ್ದುವು. ಮಕ್ಕಾ ವಾಸಿಗಳು ಮದೀನಾದ ಇಸ್ಲಾಮೀ ರಾಷ್ಟ್ರವನ್ನು ಮುಗಿಸಿ ಬಿಡುವ ಯೋಜನೆಯೊಂದಿಗೆ ಹೊರಟಿದ್ದರು. ಇದು ಪ್ರವಾದಿ ವರ್ಯರಿಗೆ(ಸ) ಆಶ್ರಯ ನೀಡಿದ್ದ ಮದೀನಾ ಆಗಿತ್ತು. ಇಸ್ಲಾಮೀ ರಾಷ್ಟ್ರವನ್ನು ಕೊನೆಗೊಳಿಸಲು ಕುರೈಷರು ಆಕ್ರಮಣ ಮಾಡಿದಾಗ ಅವರೊಂದಿಗೆ ಯುದ್ಧ ಮಾಡಬೇಕಾಯಿತು.

ಇತಿಹಾಸದ ಅನಂತರದ ಘಟ್ಟಗಳಲ್ಲಿ ರಾಜರುಗಳು ಮಾಡಿದ ಯುದ್ಧಗಳಿಗೂ ಇಸ್ಲಾಮಿಗೂ ಯಾವ ಸಂಬಂಧವೂ ಇಲ್ಲ.

ಹಿಂದೂ ಅರಸ ರಾಜೇಂದ್ರನ್ ಜಾವಾದ ಮೇಲೆ ಸೈನಿಕ ಆಕ್ರಮಣ ಮಾಡಿದರು. ಅಲ್ಲಿ ಇಂದಿಗೂ ಹಿಂದೂ ಸಂಸ್ಕೃತಿಯ ಕುರುಹುಗಳಿವೆ. ಆದರೆ ಅರಸ ರಾಜೇಂದ್ರನ್ ಹಿಂದೂ ಧರ್ಮದ ಪ್ರಚಾರಕ್ಕಾಗಿ ಸೈನಿಕ ಆಕ್ರಮಣ ಮಾಡಿದರೆಂದು ಇದರಿಂದ ತಿಳಿಯುವುದು ತಪ್ಪಾದೀತು.

ಯೂರೋಪಿನ ಕ್ರೈಸ್ತರು ಆಕ್ರಮಣ ಮಾಡಿ ಪೂರ್ವದ ದೇಶಗಳಲ್ಲಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇದರಿಂದ ಕ್ರೈಸ್ತ ಧರ್ಮಕ್ಕೆ ಪ್ರಚಾರ ಲಭಿಸಿತು. ಆದರೆ ಈ ದೇಶಗಳಲ್ಲಿ ಕ್ರೈಸ್ತ ಧರ್ಮ ಖಡ್ಗದ ಬಲದಿಂದ ವ್ಯಾಪಿಸಿತೆಂದು ನೀವು ಹೇಳಬಲ್ಲಿರಾ? ಸೈನಿಕ ಆಕ್ರಮಣವು ಸಾಮಾನ್ಯವಾಗಿ ಸಾಮ್ರಾಜ್ಯ ವಿಸ್ತರಣೆಗಾಗಿರುತ್ತದೆ. ಯಾವ ದೇಶದಲ್ಲಿ ಯಾರ ಆಡಳಿತವಿರುತ್ತದೋ

ಅವರನ್ನು ಪ್ರಜೆಗಳು ಅನುಸರಿಸ ತೊಡಗುತ್ತಾರೆ ಮತ್ತು ಅವರ ಧರ್ಮವನ್ನು ಅವಲಂಬಿಸುತ್ತಾರೆ. ಸವನರು ಎಂಬುದು ಹಿಂದೂ ಧರ್ಮದ ಒಂದು ಪಂಥ. ಆ ಪಂಥದವರ ಆಡಳಿತ ತಮಿಳ್ನಾಡಿನಲ್ಲಿ ಸ್ಥಾಪಿತವಾದಾಗ ಇಲ್ಲಿ ಸವನರ ಪಂಥವು ವ್ಯಾಪಿಸಿತು. ಭಾರತದಲ್ಲಿ ಬೌದ್ಧರ ಆಳ್ವಿಕೆ ಇದ್ದಾಗ ಬುದ್ಧ ಧರ್ಮವು ಇಲ್ಲಿ ಪ್ರಚಾರಗೊಂಡಿತು. ಇದೇ ರೀತಿ ಶೈವ ಪಂಥದ ಹಿಂದುಗಳ ಆಳ್ವಿಕೆ ಸ್ಥಾಪಿತವಾದಾಗ ಆ ಪಂಥವು ಪ್ರಚಾರ ಪಡೆಯಿತು. ವೈಷ್ಣವ ಪಂಥದವರು ಆಡಳಿತಕ್ಕೆ ಬಂದಾಗ ಆ ಪಂಥಕ್ಕೆ ಪ್ರಚಾರ ದೊರೆಯಿತು. ಇದರಿಂದ ತಿಳಿಯುವುದೇನೆಂದರೆ "ಯಥಾ ರಾಜಾ ತಥಾ ಪ್ರಜಾ" ಎಂಬ ತತ್ವದಂತೆಯೇ ಧರ್ಮದ ಪ್ರಚಾರ ನಡೆಯುತ್ತಿತ್ತೇ ವಿನಾ ಧರ್ಮ ಪ್ರಚಾರ ಕಾರ್ಯಗಳಲ್ಲಿ ಆ ಆಡಳಿತಗಾರರಿಗೆ ಆಸಕ್ತಿಯೂ ಇರಲಿಲ್ಲ. ಅದಕ್ಕಾಗಿ ಅವರು ಯುದ್ಧ ಮಾಡಿಯೂ ಇರಲಿಲ್ಲ.

ಇಸ್ಲಾಮ್ ಸ್ವೀಕರಿಸಲು ನಿರಾಕರಿಸಿದುದಕ್ಕೆ ಯಾರನ್ನಾದರೂ ಕೊಲೆಗೈದ ಘಟನೆ ಇತಿಹಾಸದಲ್ಲಿ ಎಲ್ಲೂ ಸಿಗುವುದಿಲ್ಲ.

ಆದರೆ ಕೆಥೋಲಿಕ್ ಮತ್ತು ಪ್ರೊಟೆಸ್ಟೆಂಟ್‌ಗಳ ಮಧ್ಯೆ ಘರ್ಷಣೆಯಲ್ಲಿ ಬೃಹತ್ ಪ್ರಮಾಣದಲ್ಲಿ ಕೊಲೆ ಸುಲಿಗೆಗಳು ನಡೆದಿವೆ. ದೂರ ಹೋಗುವ ಅಗತ್ಯವಿಲ್ಲ. ತಮಿಳ್ನಾಡಿನ ಇತಿಹಾಸವನ್ನೇ ನೋಡಿರಿ. ಮಧುರೆಯಲ್ಲಿ ಜ್ಞಾನ ಸಮುದ್ರನ ಕಾಲದಲ್ಲಿ ಸವನರ ಪಂಥದ ಎಂಟು ಸಾವಿರ ಮಂದಿಯನ್ನು ಗಲ್ಲಿಗೇರಿಸಲಾಯಿತು. ಇದು ನಮ್ಮ ಇತಿಹಾಸ.

ಅರೇಬಿಯಾದಲ್ಲಿ ಪ್ರವಾದಿವರ್ಯರು(ಸ) ಆಡಳಿತ ನಡೆಸುತ್ತಿದ್ದಾಗ ಅಲ್ಲಿ ಯಹೂದಿಗಳೂ ಕ್ರೈಸ್ತರೂ ನೆಲೆಸಿದ್ದರು. ಆದರೆ ಅವರನ್ನು ಯಾವ ರೀತಿಯಿಂದಲೂ ಪೀಡಿಸಲಾಗಿರಲಿಲ್ಲ.

ಭಾರತದಲ್ಲಿ ಮುಸ್ಲಿಮ್ ರಾಜರ ಆಳ್ವಿಕೆಯ ಕಾಲದಲ್ಲಿ ಹಿಂದೂ ಧರ್ಮವನ್ನು ಸ್ವೀಕರಿಸುವ ಮತ್ತು ಅದರಂತೆ ನಡೆಯುವ ಪೂರ್ಣ ಸ್ವಾತಂತ್ರ್ಯವಿತ್ತು. ಆ ರಾಜರು ಹಿಂದೂ ಮಂದಿರಗಳನ್ನು ರಕ್ಷಿಸಿದರೆಂಬುದಕ್ಕೆ ಇತಿಹಾಸ ಸಾಕ್ಷಿಯಿದೆ.

ಮುಸ್ಲಿಮ್ ರಾಜರ ಸೇನಾ ಕಾರ್ಯಾಚರಣೆಗಳು ಇಸ್ಲಾಮಿನ ಪ್ರಚಾರಾರ್ಥವಾಗಿರುತ್ತಿದ್ದರೆ ದೆಹಲಿಯ ಓರ್ವ ಮುಸ್ಲಿಮ್ ಸುಲ್ತಾನನ ವಿರುದ್ಧ ಬಾಬರ್ ಎಂದೂ ಯುದ್ಧ ಹೂಡುತ್ತಿರಲಿಲ್ಲ. ಸಾಮ್ರಾಜ್ಯ ವಿಸ್ತರಣೆಯು ಆ ಕಾಲದ ಸರ್ವಾಂಗೀಕೃತ ರಾಜಕೀಯ ಧೋರಣೆಯಾಗಿತ್ತು. ಸಾಮ್ರಾಜ್ಯ ವಿಸ್ತರಣೆ ಎಂದೂ ಧರ್ಮ ಪ್ರಚಾರಾರ್ಥವಾಗಿರುತ್ತಿ ರಲಿಲ್ಲ. ಎಷ್ಟೋ ಮಂದಿ ಮುಸ್ಲಿಮ್ ವಿದ್ವಾಂಸರು ಮತ್ತು ಸೂಫಿ ಸಂತರು ಇಸ್ಲಾಮಿನ ಪ್ರಚಾರಕ್ಕಾಗಿ ಭಾರತಕ್ಕೆ ಬಂದಿದ್ದರು. ಅವರು ತಮ್ಮಷ್ಟಕ್ಕೇ ಇಸ್ಲಾಮಿನ ಪ್ರಚಾರ ಕಾರ್ಯವನ್ನು ಕೈಗೊಂಡರು. ಮುಸ್ಲಿಮ್ ಆಡಳಿತಗಾರರೊಂದಿಗೆ ಅವರಿಗೆ ಯಾವ ಸಂಬಂಧವೂ ಇರಲಿಲ್ಲ. ನಾಗೂರ್‌ನಲ್ಲಿ ಸಮಾಧಿಸ್ಥರಾಗಿರುವ ಹಝ್ರತ್ ಶಾಹುಲ್ ಹಮೀದ್ ಮತ್ತು ಅಜ್ಮೀರದ ಖ್ವಾಜಾ ಮುಈನುದ್ದೀನ್ ಚಿಶ್ತಿಯವರನ್ನು ಇದಕ್ಕೆ ನಿದರ್ಶನವಾಗಿ ಉಲ್ಲೇಖಿಸಬಹುದು.

ತನ್ನ ತತ್ವಗಳು ಮತ್ತು ನೈತಿಕ ಶಿಕ್ಷಣಗಳಿಂದಾಗಿ ಇಸ್ಲಾಮ್ ಅಮಿತ ಆಕರ್ಷಣೆ ಯನ್ನು ಹೊಂದಿದೆ. ಆದುದರಿಂದಲೇ ಮನುಷ್ಯ ಹೃದಯಗಳು ಅದರತ್ತ ತನ್ನಿಂತಾನೇ ಆಕರ್ಷಿತ ವಾಗುತ್ತಿವೆ. ಇಂತಹ ಒಂದು ಧರ್ಮದ ಪ್ರಚಾರಕ್ಕಾಗಿ ಖಡ್ಗದ ಅಗತ್ಯವಾದರೂ ಏಕೆ ಬೀಳಬೇಕು?

❧•❧

# ಇಸ್ಲಾಮ್ ಮತ್ತು ಕಮ್ಯೂನಿಸಮ್

ಬಂಡವಾಳಶಾಹಿತ್ವದ ಬೆನ್ನೆಲುಬು ಮುರಿಯಬಲ್ಲ ಸಿದ್ಧಾಂತಗಳು ಕೇವಲ ಎರಡು. ಒಂದು ಕಮ್ಯೂನಿಸಮ್, ಮತ್ತೊಂದು ಇಸ್ಲಾಮ್.

ಇಲ್ಲಿನ ಕಮ್ಯೂನಿಸ್ಟರ ಪೈಕಿ ಕೆಲವು ಮಂದಿ ಮಾತ್ರ "ದಾಸ್ ಕೇಪಿಟಲ್"ನ್ನು (DAS CAPITAL) ಗಹನವಾಗಿ ಅಭ್ಯಸಿಸಿರಬಹುದು. "ಮಿಗತೆ ಮೌಲ್ಯ" (SURPLUS VALUE) ಎಂಬುದು ಕಾರ್ಲ್ ಮಾರ್ಕ್ಸ್‌ನ ಒಂದು ಸಿದ್ಧಾಂತ. ಈ ತತ್ವದ ಪ್ರತಿಪಾದನೆಗಾಗಿಯೇ ಅವರು ಬರೆದಿರುವ ಗ್ರಂಥವು 3 ಬೃಹತ್ ಸಂಪುಟಗಳಲ್ಲಿವೆ.

ಬಂಡವಾಳಿಗನು ತನ್ನ ಬಂಡವಾಳವನ್ನು ಹೂಡುತ್ತಾನೆ. ಕಾರ್ಮಿಕ ತನ್ನ ಶ್ರಮದಿಂದ ಆ ಬಂಡವಾಳದಲ್ಲಿ ಲಾಭ ಉಂಟು ಮಾಡುತ್ತಾನೆ. ಈ ಲಾಭವು ಮೂಲ ಬಂಡವಾಳಕ್ಕಿಂತ ಹೆಚ್ಚಿರುತ್ತದೆ. ಈ ಹೆಚ್ಚಿನ ಆದಾಯದಿಂದ ಭಂಡವಾಳಿಗನು ಮತ್ತೊಂದು ಕಾರ್ಖಾನೆಯನ್ನು ಸ್ಥಾಪಿಸುತ್ತಾನೆ ಹಾಗೂ ಜನತೆಯನ್ನು ಶೋಷಿಸುತ್ತಾನೆ. ಇದು ಕಮ್ಯೂನಿಸಮ್‌ನ ವಾದ. ಈ ವಾದದಂತೆ ಕಮ್ಯೂನಿಸಮ್ ಬಂಡವಾಳದ ನೈಜ ಶಕ್ತಿಯಾದ "ಮಿಗತೆ ಮೌಲ್ಯ"ವನ್ನು ನಿರ್ನಾಮ ಮಾಡುವ ಪಣ ತೊಡುತ್ತದೆ. ಬಂಡವಾಳ ಶಾಹಿತ್ವವನ್ನು ನಾಶ ಮಾಡಿ ಅದು ಉತ್ಪಾದನೆಯ ಎಲ್ಲ ಮಾಧ್ಯಮಗಳನ್ನೂ ರಾಷ್ಟ್ರೀಕರಿಸುತ್ತದೆ.

ಉದ್ದಿಮೆಗಳ ರಾಷ್ಟ್ರೀಕರಣವು ಸಮಸ್ಯೆಗೆ ಪರಿಹಾರವೇ ಎಂಬುದು ವಿಚಾರಾರ್ಹ ಸಂಗತಿ. ರಾಷ್ಟ್ರೀಕೃತ ಉದ್ದಿಮೆಗಳಲ್ಲಿಯೂ ಮಿಗತೆ ಮೌಲ್ಯ ಅಥವಾ ಲಾಭವು ಉಂಟಾಗುತ್ತದೆ. ಈ ಲಾಭವನ್ನು ಹೇಗೆ ನಿವಾರಿಸುವುದು ಮತ್ತು ಇಂದು ಕಾರ್ಯತಃ ಆ ಲಾಭ ಏನಾಗುತ್ತದೆ ಎಂಬುದನ್ನು ಪರಿಶೀಲಿಸಬೇಕಾಗಿದೆ.

ಮೊದಲು ಉದ್ದಿಮೆಗಳನ್ನು ರಾಷ್ಟ್ರೀಕರಿಸಲಾಗುತ್ತದೆ. ಗಳಿಸಿದ ಲಾಭದ ಒಂದಂಶವನ್ನು ಕಾರ್ಮಿಕರಿಗೆ ನೀಡಲಾಗುತ್ತದೆ. ಉಳಿದ ಜನತೆಗೆ ಏನೂ ಇಲ್ಲ.

ಯಾವುದೇ ಉದ್ದಿಮೆಯ ಲಾಭದಿಂದ ಕೇವಲ ಅದರಲ್ಲಿ ದುಡಿಯುವ ಕಾರ್ಮಿಕರಿಗೆ ಮಾತ್ರ ಪಾಲು ದೊರೆಯುತ್ತದೆ. ಇತರ ಉದ್ದಿಮೆಗಳಲ್ಲಿ ದುಡಿಯುವ ಕಾರ್ಮಿಕರಿಗೋ ದೇಶದ ಬಡ ಜನತೆಗೋ ಅದರಲ್ಲಿ ಯಾವ ಪಾಲೂ ದೊರೆಯುವುದಿಲ್ಲ. ರಾಷ್ಟ್ರೀಕರಣದ ಈ ತಾತ್ಪರ್ಯವು ಸರಿಯಲ್ಲ. ಲಾಭಾಂಶವು ದೇಶದ ಎಲ್ಲ ಪ್ರಜೆಗಳ ಪಾಲಿಗೂ ದೊರಕುವಂತಾಗಬೇಕು.

ಕಮ್ಯೂನಿಸ್ಟ್ ಸರಕಾರವು ಕಾನೂನಿನ ಬಲದಿಂದ ಲಾಭವನ್ನು ದೋಚಿ ಇತರರಿಗೆ ನೀಡುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಇಸ್ಲಾಮಿನಲ್ಲಿ ಮಿಗತೆ ಮೌಲ್ಯವನ್ನು ಇತರರಿಗಾಗಿ ವ್ಯಯಿಸುವಂತೆ ಪ್ರೋತ್ಸಾಹಿಸಲಾಗಿದೆ, ವಿಧಿಸಲಾಗಿದೆ. ಈ ಕಾರ್ಯದ ಹಿಂದಿರುವ ಪ್ರೇರಕ ಶಕ್ತಿ ಸರಕಾರದ ಒತ್ತಡವಲ್ಲ; ವಿಶ್ವಾಸದ ಶಕ್ತಿಯಾಗಿದೆ.

ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಕೇವಲ ಉದ್ದಿಮೆಗಳನ್ನೇ ರಾಷ್ಟ್ರೀಕರಿಸಲಾಗುತ್ತದೆ. ಲಾಭ ವಿತರಣೆಯ ಎಲ್ಲ ವ್ಯವಸ್ಥೆಯೂ ಆ ಉದ್ದಿಮೆಯ ಕಾರ್ಮಿಕರಿಗೇ ಸೀಮಿತ ವಾಗಿರುತ್ತದೆ. ಖಾಸಗಿ ಒಡೆತನದಲ್ಲಿರುವ ಆಸ್ತಿಪಾಸ್ತಿಗಳ ಲಾಭದ ವಿತರಣೆಯ ಕಲ್ಪನೆ ಯಾಗಲೀ ವ್ಯವಸ್ಥೆಯಾಗಲೀ ಇರುವುದಿಲ್ಲ. ಇಸ್ಲಾಮ್ ವ್ಯಕ್ತಿಗಳ ಆದಾಯದ ಮಿಗತೆ ಮೌಲ್ಯವನ್ನೂ ಇತರರ ಮೇಲೆ ಖರ್ಚು ಮಾಡುವಂತೆ ಆಜ್ಞಾಪಿಸುತ್ತದೆ. ಮಿಗತೆ ಮೌಲ್ಯದ ಒಂದಂಶವನ್ನೇ ಝಕಾತ್‌ನ ರೂಪದಲ್ಲಿ ತೆಗೆದು ಖರ್ಚು ಮಾಡುವ ವ್ಯವಸ್ಥೆ ಮಾಡುತ್ತದೆ. ಅರಬೀ ಭಾಷೆಯಲ್ಲಿ "ಝಕಾತ್" ಎಂಬ ಪದದ ಅರ್ಥ ಆತ್ಮಶುದ್ಧಿ ಮತ್ತು ಪರಿಶುದ್ಧತೆ ಆಗಿದೆ. ತನ್ನ ಆದಾಯದ ಒಂದಂಶವನ್ನು ಝಕಾತ್‌ನ ರೂಪದಲ್ಲಿ ವ್ಯಯಿಸುವ ಮೂಲಕ ವ್ಯಕ್ತಿಯು ತನ್ನ ಸೊತ್ತನ್ನು ಪರಿಶುದ್ಧಗೊಳಿಸುತ್ತಾನೆ. ಹಾಗೆ ಮಾಡದೆ ಹೋದರೆ ಪೂರ್ತಿ ಸೊತ್ತು ಅಶುದ್ಧವೆನಿಸುತ್ತದೆ. ಇಂತಹ ಉದಾತ್ತ ಶಿಕ್ಷಣ ಜಗತ್ತಿಗೆ ನೀಡಿರುವುದು ಇಸ್ಲಾಮ್ ಧರ್ಮ ಮಾತ್ರವಾಗಿದೆ.

ತನ್ನ ಸೊತ್ತಿನಿಂದ ಒಳಿತಿನ ಕಾರ್ಯಗಳಿಗೆ ವ್ಯಯಿಸಬೇಕೆಂಬುದು ಒಂದು ಧಾರ್ಮಿಕ ಉಪದೇಶವಲ್ಲವೇ? ಓರ್ವ ಧನಿಕನು ಝಕಾತ್ ನೀಡದೆ ವಂಚಿಸಿದರೆ ಅವನನ್ನು ಆ ವಂಚನೆಯಿಂದ ತಡೆಯುವುದಾದರೂ ಹೇಗೆ ಎಂದು ಯಾರಾದರೂ ಇಲ್ಲಿ ಆಕ್ಷೇಪಿಸಬಹುದು.

ಈ ಆಕ್ಷೇಪದ ಉತ್ತರ ನಮಗೆ ಇತಿಹಾಸದಲ್ಲಿ ದೊರೆಯುತ್ತದೆ. "ಝಕಾತ್" ನೀಡಲು ನಿರಾಕರಿಸಿದವರ ವಿರುದ್ಧ ಪ್ರಥಮ ಖಲೀಫ ಹ. ಅಬೂಬಕರ್ ಸಿದ್ದೀಕ್‌ರವರು(ರ) ಸಶಸ್ತ್ರ ಹೋರಾಟ ನಡೆಸಿದ್ದರು. ವಸ್ತುತಃ ಈ ರೀತಿ ಝಕಾತ್ ನೀಡಲು ನಿರಾಕರಿಸಿದವರು ಮುಸ್ಲಿಮರೇ ಆಗಿದ್ದರು. ಇಸ್ಲಾಮ್ ಧರ್ಮದ ಮೇಲೆ ಮತ್ತು ಪ್ರವಾದಿವರ್ಯರ ಮೇಲೆ ವಿಶ್ವಾಸವಿರಿಸಿದವರಾಗಿದ್ದರು. ನಮಾಝನ್ನು ಯಥಾವಿಧಿ ನಿರ್ವಹಿಸುವವರಾಗಿದ್ದರು. ಆದರೂ ಖಲೀಫರು ಅವರ ವಿರುದ್ಧ ಹೋರಾಟ ನಡೆಸಿರಬೇಕಾದರೆ ಅವರು ಎಸಗಿದ ಅಪರಾಧ ಎಷ್ಟು ಘೋರವಾದುದೆಂಬುದು ವೇದ್ಯವಾಗುತ್ತದೆ. .ದೇವ ವಿಶ್ವಾಸದ ಬಳಿಕ ಇಸ್ಲಾಮ್ ಸೊತ್ತಿನಲ್ಲಿ ಒಂದಂಶವನ್ನು ಅಶಕ್ತರಿಗಾಗಿ ವ್ಯಯಿಸುವ "ಝಕಾತ್" ಪದ್ಧತಿಗೆ ಅತ್ಯಧಿಕ ಮಹತ್ವ ನೀಡಿದೆ. ಜನರು ತಮ್ಮ ವೈಯಕ್ತಿಕ ಆದಾಯ ಮತ್ತು ಖಾಸಗಿ ಸೊತ್ತಿನ ಒಂದಂಶವನ್ನು ಇತರರ ಮೇಲೆ ವ್ಯಯಿಸಬೇಕೆಂದು ಕಮ್ಯೂನಿಸಮ್ ನಿರ್ದೇಶಿಸುವುದಿಲ್ಲ. ಆದರೆ ಇಸ್ಲಾಮ್ ಅದನ್ನು ಕಡ್ಡಾಯಗೊಳಿಸಿದೆ. ಈ ಆಜ್ಞೆಯನ್ನು ಉಲ್ಲಂಘಿಸುವವರ ವಿರುದ್ಧ ಬಲ ಪ್ರಯೋಗಿಸುವ ಅಧಿಕಾರ ಇಸ್ಲಾಮಿ ಸರಕಾರಕ್ಕೆ ನೀಡಲಾಗಿದೆ.

ಇಸ್ಲಾಮ್ ಕಮ್ಯೂನಿಸಮ್‌ಗಿಂತ ಉನ್ನತವೂ ಶ್ರೇಷ್ಠವೂ ಆಗಿದೆ.

ತನ್ನ ಬಂಡವಾಳವು ತನ್ನ ಐಷಾರಾಮಕ್ಕೆ ಇರುವಂತಹದ್ದು ಎಂಬುದು ಸಾಮಾನ್ಯ ಬಂಡವಾಳಿಗರ ವಿಚಾರಶೈಲಿ. ಅದನ್ನು ಇತರರಿಗಾಗಿ ವ್ಯಯಿಸುವುದೆಂದರೆ ತಾನು ಬಡತನವನ್ನು ಆಹ್ವಾನಿಸಿದಂತೆ. ಈ ಆಶಂಕೆಯು ಸಾಮಾನ್ಯ ಎಲ್ಲ ಬಂಡವಾಳಿಗರನ್ನೂ ಕಾಡುತ್ತಿರುತ್ತದೆ.

ಇಸ್ಲಾಮ್ ಮೊಟ್ಟಮೊದಲು ಈ ಸಂದೇಹದ ಮೂಲೋತ್ಪಾಟನೆ ಮಾಡುತ್ತದೆ. ಖರ್ಚು ಮಾಡುವುದರಿಂದ ಬಡತನವಲ್ಲ, ಸಿರಿವಂತಿಕೆ ಬರುತ್ತದೆ ಎಂದು ಕುರ್‌ಆನ್ ಸಾರಿ ಹೇಳುತ್ತದೆ.

"ಶೈತಾನನು ನಿಮಗೆ ಬಡತನದ ಬೆದರಿಕೆ ನೀಡಿ ನೀಚ ಕಾರ್ಯ(ಜಿಪುಣತೆ) ಕೈಗೊಳ್ಳುವಂತೆ ಪ್ರೇರೇಪಿಸುತ್ತಾನೆ. ಆದರೆ ಅಲ್ಲಾಹನು ನಿಮಗೆ ಆತನ ಕ್ಷಮೆ ಮತ್ತು ಅನುಗ್ರಹದ ಭರವಸೆ ನೀಡುತ್ತಾನೆ. ಅಲ್ಲಾಹನು ಅತ್ಯಂತ ಮುಕ್ತ ಹಸ್ತದವನೂ ಯುಕ್ತಿಜ್ಞನೂ ಆಗಿರುತ್ತಾನೆ."

(ಪವಿತ್ರ ಕುರ್‌ಆನ್, 2:268)

ಜಿಪುಣತೆ ಎಂದರೇನು? ಧನವನ್ನು ತನ್ನ ಕುಟುಂಬಸ್ಥರ ಮೇಲೆ ಹಾಗೂ ಮತ್ತಿತರ ಆವಶ್ಯಕತೆಗಳಿಗೆ ವ್ಯಯಿಸುವ ಬದಲು ಶೇಖರಿಸಿಡುವುದು.

ತಮಿಳು ಚಿತ್ರರಂಗದಲ್ಲಿ ಓರ್ವ ಪ್ರಖ್ಯಾತ ಗಾಯಕನಿದ್ದನು. ಆತ ಅತ್ಯಂತ ಜಿಪುಣನಾಗಿದ್ದ. ಆತನ ಪುತ್ರನ ಕಾಲಿಗೆ ಗಾಯವಾದಾಗ ಅದರ ಶುಶ್ರೂಷೆಗೂ ವ್ಯಯಿಸಲು ಹಿಂದೆ ಮುಂದೆ ನೋಡುತ್ತಿದ್ದ. ಅದರಿಂದಾಗಿ ಮಗ ತೀರಿಕೊಂಡ. ಇದು ಜಿಪುಣತೆಯ ಪರಿಣಾಮ. ಇಂತಹ ಜಿಪುಣತೆ ಮತ್ತು ಲೋಭವನ್ನು ಇಸ್ಲಾಮ್ ತೀವ್ರವಾಗಿ ವಿರೋಧಿಸುತ್ತದೆ.

ಇಸ್ಲಾಮ್ ವ್ಯಯಿಸುವ ಆಜ್ಞೆ ಮಾತ್ರ ನೀಡಿರುವುದಲ್ಲ. ವ್ಯಯದಲ್ಲಿ ಪಾಲಿಸಬೇಕಾದ ಮರ್ಯಾದೆಗಳನ್ನೂ ಬೋಧಿಸಿದೆ. ಕೆಲವರು ಹಂಗಿಸುವುದಕ್ಕಾಗಿ ಮತ್ತು ಹೆಸರು ಗಳಿಸುವುದಕ್ಕಾಗಿ ಖರ್ಚು ಮಾಡುತ್ತಾರೆ. ಈ ತರದ ದುಷ್ಪ್ರೇರಣೆಗಳನ್ನು ಇಸ್ಲಾಮ್ ನಿಷೇಧಿಸುತ್ತದೆ ಹಾಗೂ ಅದನ್ನು ಕೊನೆಗೊಳಿಸುತ್ತದೆ. ಅದು ವ್ಯಯಿಸುವುದನ್ನು ಒಂದು ಆರಾಧನಾ ವಿಧಿಯೆಂದು ಪರಿಗಣಿಸುತ್ತದೆ. ನಮಾಝ್‌ನ ಬಳಿಕ ಝಕಾತ್ ಅತಿ ಮಹತ್ವದ ಧಾರ್ಮಿಕ ಕರ್ತವ್ಯವೆನಿಸಿದೆ. ದೇವ ಸಂಪ್ರೀತಿಯ ಹೊರತು ನಿಮ್ಮ ದಾನಧರ್ಮಗಳಿಗೆ ಬೇರಾವ ಉದ್ದೇಶವೂ ಇರಬಾರದೆಂದು ಕುರ್‌ಆನ್ ತಾಕೀತು ಮಾಡಿದೆ.

ನಾನು ಕೆಲವು ನಗರಗಳಲ್ಲಿ ನೋಡಿದ್ದೇನೆ. ಯಾರೋ ಒಬ್ಬರು ಒಂದು ಸಂಸ್ಥೆಗೆ ಟ್ಯೂಬ್‌ಲೈಟ್ ದೇಣಿಗೆಯಾಗಿ ನೀಡಿದರು. ಅದರಲ್ಲಿ ದಾನ ನೀಡಿದವರ ಹೆಸರು ಬರೆದ ರೀತಿಯಿಂದಾಗಿ ಅದರ ಪ್ರಕಾಶವೇ ಹೊರ ಬರದಂತಾಯಿತು. ಇಂತಹ ದಾನ ಮತ್ತು ಕೊಡುಗೆ ತಪ್ಪು ಮಾತ್ರವಲ್ಲ ಎಲ್ಲ ಒಳಿತುಗಳನ್ನೂ ನಾಶ ಮಾಡುವಂತಹದ್ದಾಗಿದೆ. ಕೆಲವರು ಇತರರಿಗೆ ಆರ್ಥಿಕ ಅಥವಾ ಇನ್ನಿತರ ನೆರವು ನೀಡುತ್ತಾರೆ. ಆದರೆ ತಾವು ನೀಡಿದ ನೆರವಿಗಾಗಿ ಎಷ್ಟು ಹಂಗಿಸುತ್ತಾರೆಂದರೆ ನೆರವು ಪಡೆದವನ ಮನನೊಂದು ಬಿಡುತ್ತದೆ. ಇಂತಹ ಎಲ್ಲ ಕಾರ್ಯಗಳನ್ನೂ ಇಸ್ಲಾಮ್ ನಿಷೇಧಿಸುತ್ತದೆ. ಕುರ್‌ಆನ್ ಹೇಳುತ್ತದೆ:

"ನಲ್ಮೆಯ ಒಂದು ಸವಿನುಡಿ ಮತ್ತು ಕ್ಷಮೆಯು ಮನ ನೋಯಿಸುವ ದಾನಕ್ಕಿಂತ ಉತ್ತಮ". (ಪವಿತ್ರ ಕುರ್‌ಆನ್, 2:263)

ವಿನೋಬಾ ಭಾವೆಯವರು ಭೂದಾನ ಚಳವಳಿ ನಡೆಸುತ್ತಿದ್ದಾಗ ಕೆಲವರು ತಮ್ಮ ಉತ್ತಮ ಭೂಮಿಯನ್ನು ದಾನ ಮಾಡಿದರು. ಆದರೆ ಅನೇಕರು ಬಂಜರು ಮತ್ತು ಬರಡು ಭೂಮಿಯನ್ನೇ ದಾನ ಮಾಡಿದರು.

ತಮ್ಮ ಮನೆಯ ಹಳೆಯ ಹರಿದ ಬಟ್ಟೆಬರೆಗಳು, ಹಳಸಲು ಅನ್ನ, ಹರಕಲು ಸಾಮಾನುಗಳನ್ನು ಇತರರಿಗೆ ನೀಡುವ ಉದಾರಿಗಳೂ ಲೋಕದಲ್ಲಿದ್ದಾರೆ. ಹರಿದ ನೋಟು ಮತ್ತು ಖೋಟಾ ನಾಣ್ಯಗಳನ್ನು ದಾನವಾಗಿ ನೀಡುವವರೂ ಲೋಕದಲ್ಲಿ ಸಿಗಬಹುದು. ಆದರೆ ಇಸ್ಲಾಮ್ ತನ್ನಲ್ಲಿರುವ ಅತ್ಯುತ್ತಮ ವಸ್ತುಗಳನ್ನು ವ್ಯಯಿಸುವ ಶಿಕ್ಷಣ ನೀಡುತ್ತದೆ. ತನ್ನ ಅಚ್ಚುಮೆಚ್ಚಿನ ಉಡುಗೆಗಳು, ಆಹಾರ ಪಾನೀಯಗಳು, ಸೊತ್ತು-ವಿತ್ತಗಳನ್ನು ಅಲ್ಲಾಹನ ಮಾರ್ಗದಲ್ಲಿ ವ್ಯಯಿಸಲು ಆಜ್ಞಾಪಿಸುತ್ತದೆ. ನಿಮ್ಮ ಗಳಿಕೆಯಲ್ಲಿ ಅತ್ಯುತ್ತಮವಾದುದನ್ನು ದೇವ ಮಾರ್ಗದಲ್ಲಿ ಖರ್ಚು ಮಾಡಬೇಕೆಂಬುದೇ ಇಸ್ಲಾಮಿನ ಶಿಕ್ಷಣ. ಪವಿತ್ರ ಕುರ್‌ಆನ್ ಹೇಳುತ್ತದೆ:

"ಓ ಸತ್ಯ ವಿಶ್ವಾಸಿಗಳೇ! ನೀವು ಸಂಪಾದಿಸಿದ ಸಂಪತ್ತಿನಿಂದ ಮತ್ತು ನಾವು ಭೂಮಿಯಿಂದ ನಿಮಗಾಗಿ ಉತ್ಪಾದಿಸಿದುದರಲ್ಲಿ ಉತ್ತಮ ಅಂಶವನ್ನು ದೇವ ಮಾರ್ಗದಲ್ಲಿ ವ್ಯಯಿಸಿರಿ. ಅವನ ಮಾರ್ಗದಲ್ಲಿ ವ್ಯಯಿಸಲಿಕ್ಕಾಗಿ ಕೆಟ್ಟ ವಸ್ತುಗಳನ್ನು ಆಯ್ದಿರಿಸಲು ಪ್ರಯತ್ನಿಸದಿರಿ." (ಪವಿತ್ರ ಕುರ್‌ಆನ್, 2:267)

ನೀವು ಇತರರಿಗೆ ಅನ್ನ, ಬಟ್ಟೆ ಅಥವಾ ಧನದ ನೆರವು ನೀಡುವುದಿದ್ದರೆ ಅದನ್ನು ಗೌಪ್ಯವಾಗಿ ನೀಡುವುದು ಉತ್ತಮವೆಂದು ಇಸ್ಲಾಮ್ ಸಾರುತ್ತದೆ. ಆದರೆ ಅನಿವಾರ್ಯ ಸಂದರ್ಭಗಳಲ್ಲಿ ಬಹಿರಂಗವಾಗಿಯೂ ನೀಡಬಹುದಾಗಿದೆ. ಕುರ್‌ಆನಿನಲ್ಲಿ ಈ ರೀತಿಯಿದೆ:

"ನೀವು ನಿಮ್ಮ ದಾನಧರ್ಮವನ್ನು ಬಹಿರಂಗವಾಗಿ ನೀಡಿದರೆ ಒಳ್ಳೆಯದೇ. ಆದರೆ ಅರ್ಹರಾದವರಿಗೆ ಗೌಪ್ಯವಾಗಿ ನೀಡುವುದು ನಿಮ್ಮ ಮಟ್ಟಿಗೆ ಅತ್ಯುತ್ತಮವಾಗಿದೆ." (ಪವಿತ್ರ ಕುರ್‌ಆನ್, 2:271)

ದೇವಮಾರ್ಗದಲ್ಲಿ ವ್ಯಯಿಸುವ ಬಗ್ಗೆ ಒಂದು ಸಮಸ್ಯೆ ಉಧ್ಭವಿಸುತ್ತದೆ. ಓರ್ವ ದುಂದು ವೆಚ್ಚಗಾರ ಅಥವಾ ಕುಡುಕ ನಿಮ್ಮ ಬಳಿಗೆ ನೆರವಿಗಾಗಿ ಬರುತ್ತಾನೆಂದಿಟ್ಟುಕೊಳ್ಳಿ. ಆಗ ನೀವು ಅವನಿಗೆ ನೆರವು ನೀಡುವಿರಾ? ನೆರವು ನೀಡುವುದಾದರೆ ಯಾವ ತರದ ನೆರವು? ಇಸ್ಲಾಮ್ ಇಂತಹ ಪ್ರಶ್ನೆಗಳಿಗೂ ಉತ್ತರ ನೀಡಿದೆ. ದುಂದು ವೆಚ್ಚಗಾರ ಮತ್ತು ವಿವೇಕಹೀನನ ಬಳಿ ಹಣ ನೀಡಲಾಗದು. ಇದು ಇಸ್ಲಾಮಿನ ಶಿಕ್ಷಣ. ಆದರೆ ಅವರ ಅನ್ನ ಬಟ್ಟೆಯ ವ್ಯವಸ್ಥೆ ಮಾಡಬೇಕು. ಕುರ್‌ಆನಿನಲ್ಲಿ ಈ ರೀತಿಯಿದೆ:

"ನಿಮಗೆ ಅಲ್ಲಾಹನು ಜೀವನಾಧಾರವಾಗಿ ನೀಡಿದ ಸಂಪತ್ತನ್ನು ವಿವೇಕಹೀನರ ವಶಕ್ಕೆ ನೀಡಬೇಡಿರಿ. ಆದರೆ ಅವರಿಗೆ ಅನ್ನ, ಬಟ್ಟೆಗಳನ್ನು ನೀಡಿರಿ ಮತ್ತು ಅವರಿಗೆ ಒಳಿತಿನೆಡೆಗೆ ಮಾರ್ಗದರ್ಶನ ಮಾಡಿರಿ." (ಪವಿತ್ರ ಕುರ್‌ಆನ್, 4:5)

ಅವರ ಮೂಲಭೂತ ಆವಶ್ಯಕತೆಗಳಾದ ಅನ್ನ ಬಟ್ಟೆಗಳ ಬಗ್ಗೆ ಚಿಂತನೆ ನಡೆಸಿದ ಬಳಿಕ ಇಸ್ಲಾಮ್ ಈ ಬಗ್ಗೆ ನೀಡಿರುವ ಆದೇಶಗಳ ಬಗ್ಗೆ ಒಂದು ಪಕ್ಷಿನೋಟ ಹರಿಸೋಣ.

1. ನಿಮ್ಮ ಮತ್ತು ನಿಮ್ಮ ಬಂಧು ಬಳಗದವರ ಮೇಲೆ ವ್ಯಯಿಸಿದ ಬಳಿಕ ಉಳಿಯುವ ಸಂಪತ್ತನ್ನು ದೇವ ಮಾರ್ಗದಲ್ಲಿ ವ್ಯಯಿಸಿರಿ.

2. ನಿಮ್ಮ ಶಕ್ತಿಗೆ ಮೀರಿ ವ್ಯಯಿಸಬೇಡಿರಿ. ಜಿಪುಣತೆಯನ್ನು ತೋರಬೇಡಿರಿ. ನಿಮ್ಮ ನಿಲುವು ಮಧ್ಯಮ ತರದ್ದಾಗಿರಬೇಕು.

3. ಖರ್ಚು ಮಾಡುವುದರಿಂದ ನಿಮ್ಮ ಕೈಗಳನ್ನು ಸಂಪೂರ್ಣ ತಡೆದಿರಿಸದಿರಿ. ಹಾಗೆಯೇ ಸ್ವಯಂ ಸಂಕಷ್ಟಕ್ಕೆ ಈಡಾಗುವಂತೆ ಅವನ್ನು ಪೂರ್ಣ ತೆರೆದಿರಿಸಲೂ ಬೇಡಿರಿ.

4. ಬಡವರಾದ ನಿಮ್ಮ ಆಪ್ತ ಬಂಧುಗಳು, ನಿರ್ಗತಿಕರು, ದರಿದ್ರರು, ಅನಾಥರು, ಯಾತ್ರಿಕರು ನಿಮ್ಮ ನೆರವಿಗೆ ಅರ್ಹರಾದವರಾಗಿರುತ್ತಾರೆ.

ತನ್ನ ಸೊತ್ತಿನ ಝಕಾತ್ ನೀಡುವುದು ಮುಸ್ಲಿಮರ ಮೇಲೆ ಕಡ್ಡಾಯವಾಗಿದೆ. ಈ ಕರ್ತವ್ಯ ನಿರ್ವಹಣೆಯಲ್ಲಿ ಅಸಡ್ಡೆ ತೋರಿಸುವವರಿಗೆ ಅತ್ಯಂತ ಕಠಿಣ ಶಿಕ್ಷೆಯ ಬೆದರಿಕೆಯಿದೆ. ಒಮ್ಮೆ ಪ್ರವಾದಿವರ್ಯರು(ಸ) ಓರ್ವ ಮಹಿಳೆಯ ಕೈಯಲ್ಲಿ ಬಂಗಾರದ ಬಳೆಯನ್ನು ಕಂಡರು. ನೀವು ಇದರ ಝಕಾತ್ ಕೊಡುತ್ತೀರಾ? ಎಂದು ಪ್ರಶ್ನಿಸಿದರು. ಮಹಿಳೆ ಇಲ್ಲವೆಂದು ಉತ್ತರಿಸಿದಳು. ಆಗ ಪ್ರವಾದಿವರ್ಯರು "ಪರಲೋಕದಲ್ಲಿ ನಿಮಗೆ ಬೆಂಕಿಯ ಬಳೆಗಳನ್ನು ತೊಡಿಸಲಾಗುವುದು" ಎಂದರು. (ಆ ಮಹಿಳೆ ತನ್ನ ಬಳೆಯನ್ನೇ ದಾನವಾಗಿ ನೀಡಿದಳು.)

ಝಕಾತ್‌ನ ಹಣವನ್ನು ಯಾರ ಮೇಲೆ ವ್ಯಯಿಸಬಹುದೆಂಬುದರ ಬಗ್ಗೆ ಕುರ್‌ಆನಿನಲ್ಲಿ ಸ್ಪಷ್ಟೀಕರಣವಿದೆ. ಝಕಾತ್‌ನ ಹಣವನ್ನು ಬಡವರು, ನಿರ್ಗತಿಕರು, ಸಾಲಗಾರರು ಮತ್ತು ಯಾತ್ರಿಕರ ಮೇಲೆ ವ್ಯಯಿಸಬಹುದಾಗಿದೆ. ಅಲ್ಲದೆ ಮನ ಸಂತೃಪ್ತಿಗಾಗಿ ಮತ್ತು ಜೀತ ವಿಮೋಚನೆಗಾಗಿಯೂ ಝಕಾತ್‌ನ ಹಣವನ್ನು ವಿನಿಯೋಗಿಸಬಹುದು. ಹಾಗೆಯೇ ಬಂಧನದಲ್ಲಿರುವವರ ಬಂಧ ವಿಮೋಚನೆಗಾಗಿಯೂ ಝಕಾತ್‌ನ ಹಣ ಉಪಯೋಗಿಸಬಹುದು. ಝಕಾತ್ ವಸೂಲಿ ವಗೈರೆಯ ಕೆಲಸದಲ್ಲಿ ನೇಮಕಗೊಂಡವರ ಸಂಬಳವನ್ನೂ ಆ ಖಾತೆಯಿಂದಲೇ ಕೊಡಬಹುದು. ದೇವ ಮಾರ್ಗದಲ್ಲಿ ವ್ಯಯಿಸುವುದು ಕೂಡಾ ಝಕಾತ್ ವ್ಯಯಗಳಲ್ಲಿ ಒಂದು. ದೇವ ಮಾರ್ಗವೆಂಬುದು ಅರ್ಥ ತಾತ್ಪರ್ಯಗಳ ದೃಷ್ಟಿಯಲ್ಲಿ ಅತ್ಯಂತ ಸಮಗ್ರ ಪಾರಿಭಾಷಿಕ. ಒಳಿತಿನ ಎಲ್ಲ ಕಾರ್ಯಗಳೂ ದೇವ ಮಾರ್ಗದ ಅಧೀನ ಬರುತ್ತದೆ. ಮುಖ್ಯವಾಗಿ ಧರ್ಮದ ಪ್ರಚಾರ, ಪ್ರಸಾರ ಮತ್ತು ಧರ್ಮದ ಉತ್ತುಂಗತೆಗಾಗಿ ಮಾಡುವ ಎಲ್ಲ ಪರಿಶ್ರಮವೂ ದೇವ ಮಾರ್ಗದಲ್ಲಿ ಸೇರುತ್ತದೆ. ತಾನು ಪೋಷಣೆಯ ಭಾರವನ್ನು ಹೊರಬೇಕಾಗಿರುವ ತಂದೆ, ತಾಯಿ ಮತ್ತು ಸಂತಾನಗಳ ಮೇಲೆ ಝಕಾತಿನ ಹಣವನ್ನು ವಿನಿಯೋಗಿಸಬಾರದು. ಝಕಾತ್ ಇವರ ಹೊರತು ಇತರರಿಗೆ ನೀಡಬೇಕೆಂದು ಆಜ್ಞಾಪಿಸಲಾಗಿದೆ.

ಇನ್ನು ಇಸ್ಲಾಮೀ ಶಿಕ್ಷಣದ ಇನ್ನೊಂದು ಮುಖವನ್ನು ನೋಡೋಣ. ಬೇಡುವುದು ಮತ್ತು ಸಹಾಯ ಯಾಚಿಸುವುದರಿಂದ ಸಾಧ್ಯವಿದ್ದಷ್ಟು ದೂರವಿರಬೇಕೆಂದು ಇಸ್ಲಾಮ್ ವಿಧಿಸಿದೆ. ಪ್ರತಿಯೊಬ್ಬನೂ ದಾನ ಕೊಡುವವನಾಗಲು ಪ್ರಯತ್ನಿಸಬೇಕೇ ಹೊರತು

ಪಡೆಯುವವನಾಗಲು ಪ್ರಯತ್ನಿಸಬಾರದು. ಇತರರ ಮುಂದೆ ಕೈ ಚಾಚುವುದಕ್ಕಿಂತ ಕಟ್ಟಿಗೆ ಕಡಿದು ಮಾರಾಟ ಮಾಡಿ ಅದರಿಂದ ಜೀವನ ಸಾಗಿಸುವುದೇ ಲೇಸೆಂದು ಪ್ರವಾದಿ ವರ್ಯರು(ಸ) ಹೇಳಿರುವರು.

ಒಂದು ಸಲ ಓರ್ವ ಗ್ರಾಮೀಣ ಅರಬನನ್ನು ಹತ್ತಿರ ಕರೆದು ಆತನ ಕೈಗಳನ್ನು ಪ್ರವಾದಿವರ್ಯರು(ಸ) ಚುಂಬಿಸಿದರು. ಅವನ ಕೈಗಳಲ್ಲಿ ಅತ್ಯಧಿಕ ಪರಿಶ್ರಮದ ಕುರುಹು ಗಳಿದ್ದುವು. ತನ್ನ ಜೀವನ ನಿರ್ವಹಣೆಗಾಗಿ ಆತ ಕೂಲಿ ಕೆಲಸ ಮಾಡುತ್ತಿದ್ದ. ಆತನ ಪರಿಶ್ರಮದ ದುಡಿಮೆಯ ಬಗ್ಗೆ ಮೆಚ್ಚಿಗೆ ಪ್ರಕಟಿಸುವುದಕ್ಕಾಗಿ ಪ್ರವಾದಿ(ಸ) ಆತನ ಕೈಗಳನ್ನು ಚುಂಬಿಸಿದರು.

ಒಂದೆಡೆ ಭಿಕ್ಷಾಟನೆಯಿಂದ ಇಸ್ಲಾಮ್ ಜನರನ್ನು ತಡೆದಿದೆಯಾದರೆ, ಇನ್ನೊಂದೆಡೆ ಸಸಂತೋಷ ಇತರರಿಗಾಗಿ ಧನ ವ್ಯಯಿಸುವಂತೆ ಆಜ್ಞಾಪಿಸಿದೆ. ಇಸ್ಲಾಮಿನಲ್ಲಿ ಅತ್ಯಧಿಕ ನ್ಯಾಯ ಸಮತೋಲನಗಳಿವೆಯೆಂಬುದು ಇದರಿಂದ ವ್ಯಕ್ತವಾಗುತ್ತದೆ.

# ಕೆಲವು ಸ್ಪಷ್ಟೀಕರಣಗಳು

"ನನ್ನ ಪ್ರೀತಿಯ ಧರ್ಮ" ಓದಿ ಕೆಲವು ಮಹನೀಯರು ಅಡಿಯಾರ್‌ರಿಗೆ ಇಸ್ಲಾಮಿನ ಬಗ್ಗೆ ಕೆಲವು ಆಕ್ಷೇಪಗಳು ಮತ್ತು ಕೆಲವು ಪ್ರಶ್ನೆಗಳನ್ನು ಹಾಕಿದರು. ನಾವಿಲ್ಲಿ ಆ ಪ್ರಶ್ನೆ ಹಾಗೂ ಆಕ್ಷೇಪಗಳನ್ನೂ ಅವುಗಳ ಉತ್ತರವನ್ನೂ ವಾಚಕರ ಮುಂದಿಡುತ್ತಿದ್ದೇವೆ.

## 1. ಮುಸ್ಲಿಮ್ ರಾಷ್ಟ್ರಗಳ ಆಂತರಿಕ ಯುದ್ಧ ಮತ್ತು ಇಸ್ಲಾಮ್

ಇಸ್ಲಾಮನ್ನೇ ಅನುಸರಿಸುವ ಮುಸ್ಲಿಮ್ ರಾಷ್ಟ್ರಗಳು ಪರಸ್ಪರ ಯುದ್ಧಗಳಲ್ಲಿ ಏರ್ಪಟ್ಟಿರುವುದನ್ನು ನಾವಿಂದು ಕಾಣುತ್ತಿದ್ದೇವೆ. ಹೀಗಿರುವಾಗ ಇಸ್ಲಾಮನ್ನು ನೀವು ಪ್ರೀತಿಸುವುದರ ಅರ್ಥವೇನು?

ಈ ಪ್ರಶ್ನೆಗೆ ಉತ್ತರಿಸುತ್ತಾ ಅಡಿಯಾರ್ ಹೀಗೆಂದರು:

"ನಾನು ತಿಳಿದ ಮಟ್ಟಿಗೆ ಪ್ರೀತಿಯೆಂದರೆ ಪ್ರೀತಿ. ಮುಸ್ಲಿಮರು ಏನು ಮಾಡುತ್ತಾರೆಂಬುದಕ್ಕೂ ಅದಕ್ಕೂ ಯಾವ ಸಂಬಂಧವೂ ಇಲ್ಲ. ಮುಸ್ಲಿಮರ ಕುಂದುಕೊರತೆಗಳನ್ನು ನೋಡಿ ನಾನು ಇಸ್ಲಾಮನ್ನು ಶ್ಲಾಘಿಸುವುದನ್ನು ಬಿಟ್ಟುಬಿಡಲಾರೆ" ಎಂದರು. ಆಗ ಒಬ್ಬರು ಮರು ಪ್ರಶ್ನೆ ಹಾಕಿದರು: "ಅರಬ್ ರಾಷ್ಟ್ರಗಳು ಪರಸ್ಪರ ಯುದ್ಧ ಮಾಡುತ್ತಿರುವುದರಿಂದ ಇಸ್ಲಾಮಿನ ಮೇಲಿರುವ ವಿಶ್ವಾಸ ಕುಂಠಿತವಾಗುವುದಿಲ್ಲವೇ?"

ಅಡಿಯಾರ್ ಹೇಳಿದರು: "ಬಾಹ್ಯ ನೋಟಕ್ಕೆ ಈ ಪ್ರಶ್ನೆ ಗಮನಾರ್ಹವೆಂದು ಭಾಸವಾಗುತ್ತದೆ. ಆದರೆ ವಾಸ್ತವಿಕತೆ ಬೇರೆಯೇ ಇದೆ. ವಿಶ್ವಾಸ ಕುಂಠಿತವಾಗಲು ವಾಸ್ತವಿಕ ಹಾಗೂ ಪ್ರಬಲ ಆಧಾರ ಬೇಕು. ಚೀನಾ ಮತ್ತು ವಿಯೆಟ್ನಾಮ್‌ಗಳೆರಡೂ ಕಮ್ಯೂನಿಸ್ಟ್ ರಾಷ್ಟ್ರಗಳು, ಕೆಂಬಾವುಟದ ವಾಹಕರು. ಆದರೂ ಅವುಗಳ ಮಧ್ಯೆ ಯುದ್ಧವಾಯಿತು. ಅದರಿಂದ ಭಾರತದ ಕಮ್ಯೂನಿಸ್ಟರು ನಮಗೆ ಕಮ್ಯೂನಿಝಮ್‌ನ ಮೇಲೆ ವಿಶ್ವಾಸ ಕುಂಠಿತ ವಾಗಿದೆಯೆಂದು ಹೇಳುತ್ತಾರೆಯೇ? ಖಂಡಿತ ಅವರು ಹಾಗೆ ಹೇಳಲಾರರು. ಇದೇ ರೀತಿ ಹಿಟ್ಲರ್ ಮತ್ತು ಚರ್ಚಿಲ್ ಇಬ್ಬರೂ ಕ್ರೈಸ್ತರಾಗಿದ್ದರು. ಇಬ್ಬರ ನಾಯಕತ್ವದಲ್ಲಿ ಜರ್ಮನ್ ಮತ್ತು ಇಂಗ್ಲೆಂಡ್‌ಗಳೊಳಗೆ ಅತ್ಯುಗ್ರ ಮತ್ತು ಭಯಾನಕ ಯುದ್ಧವಾಯಿತು. ಆದರೆ ಇದರಿಂದ ಕ್ರೈಸ್ತರ ಮನದಲ್ಲಿ ಕ್ರೈಸ್ತ ಧರ್ಮದ ಮೇಲಿರುವ ವಿಶ್ವಾಸ ಕುಂಠಿತವಾಯಿತೇ? ಅವರು ಕ್ರೈಸ್ತ ಧರ್ಮ ತೊರೆದರೆ? ಖಂಡಿತ ಇಲ್ಲ. ಭಾರತದ ವಿವಿಧ ಮಂದಿರಗಳಲ್ಲಿ ಪದೇ

ಪದೇ ಜಗಳಗಳಾಗಿವೆ. ಅದರಿಂದ ಮಂದಿರದ ಪೂಜಾರಿಗಳು ಹತಾಶರಾಗಿ ನಾಸ್ತಿಕರಾದರೇ? ಖಂಡಿತ ಇಲ್ಲ."

ಈ ಘಟನೆಗಳು ನಿಜವೆಂದಾದರೆ ಮುಸ್ಲಿಮ್ ರಾಷ್ಟ್ರಗಳು ಪರಸ್ಪರ ಕಚ್ಚಾಡುವುದರಿಂದ ಮಾತ್ರ ಇಸ್ಲಾಮಿನ ಬಗ್ಗೆ ಅತೃಪ್ತಿಯಾಗುವ ಪ್ರಶ್ನೆ ಹೇಗೆ ಉದ್ಭವಿಸುತ್ತದೆ?

ಇದು ವಿಭಿನ್ನ ರಾಷ್ಟ್ರಗಳ ಜಗಳ. ಇದಕ್ಕೆ ವಿಶ್ವಾಸ ಮತ್ತು ಧರ್ಮದೊಂದಿಗೆ ಯಾವ ಸಂಬಂಧವೂ ಇಲ್ಲ. ಈ ಜಗಳ ಇಂದಿದ್ದರೆ ನಾಳೆ ಕೊನೆಗೊಳ್ಳಲೂಬಹುದು. ಆದರೆ ವಿಶ್ವಾಸ ಮತ್ತು ನಂಬಿಕೆ ಇಂದೂ ಇದೆ, ನಾಳೆಯೂ ಇದ್ದೀತು. ಇದು ಬದಲಾಗುವ ಅಥವಾ ಚಂಚಲವಾಗುವ ವಸ್ತುವಲ್ಲ.

ಇಂದು ಕಮ್ಯೂನಿಝಮ್ ಜಗತ್ತಿನ ಒಂದು ಶಕ್ತಿಯಾಗಿದೆ. ಅದಕ್ಕೆ ವಿರುದ್ಧವಾಗಿ ಬಂಡವಾಳಶಾಹಿತ್ವವೂ ಒಂದು ಶಕ್ತಿಯಾಗಿದೆ. ಜಗತ್ತಿನಲ್ಲಿ ತೃತೀಯ ಶಕ್ತಿಯೊಂದಿದ್ದರೆ ಅದು ಇಸ್ಲಾಮಿನ ಶಕ್ತಿಯಾಗಿದೆ.

ಮೊದಲ ಎರಡು ಶಕ್ತಿಗಳು ಕೊನೆಗೆ ತೃತೀಯ ಶಕ್ತಿಯ ಮುಂದೆ ಶರಣಾಗಲಿವೆ. ಚರಿತ್ರೆಯ ಅಧ್ಯಯನ ಇದನ್ನೇ ಸಾದರಪಡಿಸುತ್ತದೆ. ಗತಕಾಲದ ಚರಿತ್ರೆಯೂ ಸಮಕಾಲೀನ ಚರಿತ್ರೆಯೂ ಇದನ್ನೇ ಬೊಟ್ಟು ಮಾಡುತ್ತದೆ.

ಈ ಎಲ್ಲ ಇಸ್ಲಾಮೀ ರಾಷ್ಟ್ರಗಳು ಕಡು ಬಡತನದಲ್ಲಿದ್ದುವು. ಆದರೆ ಅರೇಬಿಯಾದ ಮರಳುಗಾಡಿನಿಂದ ಲೋಕದಲ್ಲಿ ಸತ್ಯ ಪ್ರಕಾಶ ವ್ಯಾಪಿಸೀತೆಂಬುದು ಪ್ರವಾದಿವರ್ಯರ(ಸ) ಘೋಷಣೆಯಾಗಿತ್ತು. ಇಂದು ಅಲ್ಲಿ ಕಲ್ಲುಗಳಿಂದ ಪೆಟ್ರೋಲ್* ಹೊರ ಬರುತ್ತಿರುವುದನ್ನು ನಾವು ಕಾಣುತ್ತೇವೆ.

ಅರಬರು ಇಸ್ಲಾಮೀ ತತ್ವಾದರ್ಶಗಳ ಬಗ್ಗೆ ಇನ್ನಷ್ಟು ದೃಢ ವಿಶ್ವಾಸ ಮತ್ತು ಅನುಸರಣೆಯನ್ನು ಪ್ರಕಟಿಸಿದರೆ ಅವರ ಮೇಲೆ ಇಹಲೋಕದಲ್ಲಿಯೇ ಅಲ್ಲಾಹನ ಅಪಾರ ಅನುಗ್ರಹಗಳು ಸುರಿಯಲಿವೆ.

ಪ್ರವಾದಿವರ್ಯರ(ಸ) ಜೀವನವು ನಿಷ್ಕಳಂಕವಾಗಿತ್ತು. ಅಂತೆಯೇ ನಾಲ್ವರು ಖಲೀಫಾರ ಜೀವನ ಕೂಡಾ. ಇತಿಹಾಸದ ಅನಂತರದ ಘಟ್ಟಗಳಲ್ಲಿ ಕೆಲವು ಮಂದಿ ನವಾಬರು ಹಾಗೂ ಅರಸರಿಂದ ಪ್ರಮಾದಗಳು ಸಂಭವಿಸಿವೆ. ಕೆಲವು ತಪ್ಪುಗಳೂ ಅವರಿಂದ ಆಗಿವೆ. ಆದರೆ ಮುಸ್ಲಿಮ್ ಸಮುದಾಯವು ಧರ್ಮ ಹಾಗೂ ಅದರ ತತ್ವಾದರ್ಶಗಳ ಮೇಲೆ ಅಚಲವಾದ ನಂಬಿಕೆಯನ್ನು ಹೊಂದಿತ್ತು. ಇತಿಹಾಸದ ಪ್ರಥಮ ಘಟ್ಟದಲ್ಲಿ ಅವರ ಸಂಖ್ಯೆ ಲಕ್ಷಾವಧಿಯಾಗಿದ್ದರೆ ಇಂದು ಆ ಸಂಖ್ಯೆ ಕೋಟ್ಯಾವಧಿಗೆ ತಲುಪಿದೆ. ಇದರಿಂದ ವ್ಯಕ್ತವಾಗುವುದೇನೆಂದರೆ, ಕೆಲವು ಮುಸ್ಲಿಮರ ಮತ್ತು ಮುಸ್ಲಿಮ್ ರಾಷ್ಟ್ರಗಳ ಕೆಲವು ಪ್ರಮಾದಗಳು ಮತ್ತು ಲೋಪದೋಷಗಳಿಂದಾಗಿ ವಿಶ್ವಾಸದಲ್ಲಿ ಕುಂದುಂಟಾಗುವ ಪ್ರಶ್ನೆಯೇ ಏಳುವುದಿಲ್ಲ. ವ್ಯಕ್ತಿಗಳ ತಪ್ಪುಗಳಿಂದ ತತ್ವಗಳು ಮಿಥ್ಯವಾಗುವುದಿಲ್ಲ, ವಿಫಲಗೊಳ್ಳುವುದೂ ಇಲ್ಲ.

*"ಪೆಟ್ರೋಲ್" ಒಂದು ಲ್ಯಾಟಿನ್ ಪದವಾಗಿದೆ. ಅದರರ್ಥ ಕಲ್ಲು. "ಪೆಟ್ರೋಲ್" ಎಂದರೆ ಅನುಗ್ರಹಿತ ಎಂದರ್ಥ.

ವಾಸ್ತವದಲ್ಲಿ ಲೋಕದ ಅತ್ಯಂತ ಸಂಕೀರ್ಣ ಸಂಕಷ್ಟಗಳ ಪರಿಹಾರ ಮತ್ತು ಲೋಕದ ವಿಪತ್ತುಗಳ ವಿಮೋಚನೆಯಿರುವುದು ಇಸ್ಲಾಮಿನಲ್ಲಿ. ಸೂರ್ಯನೇ ಮಸುಕಾದರೆ ಬೆಳಕು ಎಲ್ಲಿಂದ ಬರಬೇಕು? ಸಮುದ್ರದ ನೀರೇ ಉಪ್ಪು ಕಳೆದುಕೊಂಡರೆ ಉಪ್ಪು ಎಲ್ಲಿಂದ ಬರಬೇಕು? ಚಿಲುಮೆಯೇ ಬತ್ತಿ ಹೋದರೆ ನೀರಿನ ಧಾರೆ ಎಲ್ಲಿಂದ ಬರಬೇಕು? ಇಸ್ಲಾಮ್ ವಿಫಲಗೊಂಡರೆ ಲೋಕ ಮತ್ತು ಮಾನವಕುಲ ಸಂಕಷ್ಟಗಳ ಪರಿಹಾರ ಎಲ್ಲಿಂದ ಪಡೆದೀತು?

## 2.

ಮುಸ್ಲಿಮರು ಕರುಣೆಯಿಲ್ಲದವರೆಂಬ ಮಾತು ಮುಸ್ಲಿಮೇತರ ಬಂಧುಗಳಲ್ಲಿ ಪ್ರಚಾರದಲ್ಲಿದೆ. ಅವರಲ್ಲಿ ಪಾಶವೀ ಶಿಕ್ಷೆಗಳನ್ನು ನೀಡಲಾಗುತ್ತದೆ. ಕಳ್ಳರ ಕೈ ಕತ್ತರಿಸಲಾಗುತ್ತದೆ. ವ್ಯಭಿಚಾರಕ್ಕೆ ಕಲ್ಲು ಹೊಡೆದು ಕೊಲ್ಲುವ ಶಿಕ್ಷೆ ನೀಡಲಾಗುತ್ತದೆ ಎಂಬ ಮಾತನ್ನು ವ್ಯಾಪಕವಾಗಿ ಪ್ರಚಾರಗೊಳಿಸಲಾಗಿದೆ. ಮುಸ್ಲಿಮರು ಸೈನಿಕ ಆಕ್ರಮಣ ನಡೆಸಿ ಮಂದಿರಗಳನ್ನು ಕೆಡವಿ ಹಾಕಿದರು. ಅನ್ಯಾಯ ಅಕ್ರಮಗಳನ್ನು ನಡೆಸಿದರು ಎಂದೂ ಪ್ರಚಾರದಲ್ಲಿದೆ. ಇದರ ಆಧಾರದಲ್ಲಿ ಮುಸ್ಲಿಮರನ್ನು ಆಕ್ರಮಣಕಾರಿಗಳೆಂದೂ ಕರುಣೆಯಿಲ್ಲದವರೆಂದೂ ಹೇಳಲಾಗುತ್ತದೆ.

ಈ ಆರೋಪಗಳನ್ನು ಹೊರಿಸುವ ಮೊದಲು ಜನರು ತಮ್ಮ ಇತಿಹಾಸವನ್ನೂ ಒಮ್ಮೆ ನೋಡುವುದು ಒಳಿತು. ಆಗ ವಾಸ್ತವಿಕತೆಯು ಬಟ್ಟಬಯಲಾಗುತ್ತದೆ.

❖ ಕರುವನ್ನು ಕೊಂದದ್ದಕ್ಕಾಗಿ ಮನುಸ್ಮೃತಿಯ ಆದೇಶದಂತೆ ಚೋಳನ್ ತನ್ನ ಮಗನನ್ನೇ ನೇಣುಗಂಬಕ್ಕೆ ಏರಿಸಿದನು. ಈ ಕೃತ್ಯವನ್ನು ಏನೆಂದು ಹೇಳಬೇಕು?

❖ ...ನ ತೋಟದಿಂದ ಒಂದು ಹಣ್ಣು ನದಿಯಲ್ಲಿ ಬಿದ್ದು ತೇಲುತ್ತಾ ಬಂತು. ಓರ್ವ ಬಾಲಕಿ ಅದನ್ನು ಹೆಕ್ಕಿ ತಿಂದಳು. ನಣ್ಣನ್ ಎಂಬ ರಾಜನು ಈ ಅಪರಾಧಕ್ಕಾಗಿ ಬಾಲಕಿಗೆ ಮರಣದಂಡನೆ ವಿಧಿಸಿದನು.

❖ ಪ್ರಸಿದ್ಧ ಕವಿ ಕಂಗಿಯ ಕಾಲಿನ ಬಳೆಯನ್ನು ಓರ್ವ ಅಕ್ಕಸಾಲಿಗ ಕದ್ದಾಗ ಆ ಕಾಲದ ಎಲ್ಲ ಅಕ್ಕಸಾಲಿಗರನ್ನು ಕೊಲೆಗೈಯಲಾಯಿತು.

❖ ಜ್ಞಾನಸಮುದ್ರ ಎಂಬ ಓರ್ವ ನಾಯಕ ಒಂದು ಮಠದಲ್ಲಿ ವಾಸವಾಗಿದ್ದ. ಸವನರು ಎಂಬ ಜಾತಿಯ ಜನರು ಆ ಮಠಕ್ಕೆ ಬೆಂಕಿ ಹಚ್ಚಲು ಯತ್ನಿಸಿದರು. ಈ ಅಪರಾಧಕ್ಕಾಗಿ ಆ ಜಾತಿಯ 8 ಸಾವಿರ ಮಂದಿಯನ್ನು ಗಲ್ಲಿಗೇರಿಸಲಾಯಿತು.

❖ ಅಪ್ಸರ್ ಎಂಬ ಹೆಸರಿನ ಒಬ್ಬನನ್ನು ಧರ್ಮ ಪರಿವರ್ತನೆಯ ಅಪರಾಧಕ್ಕಾಗಿ ಕಲ್ಲಿಗೆ ಕಟ್ಟಿ ಸಮುದ್ರಕ್ಕೆ ಎಸೆಯಲಾಯಿತು. ಅವನು ಹೇಗೂ ಬದುಕಿ ಹೊರಬಂದಾಗ ಅವನನ್ನು ಸುಣ್ಣ ಬೇಯುವ ಒಲೆಗೆ ಹಾಕಿ ಉರಿಸಲಾಯಿತು.

❖ ತೆನಾಲಿರಾಮನ ಚರಿತ್ರೆಯ ಘಟನೆಗಳ ಪೈಕಿ ರಾಜಾಜ್ಞೆಯನ್ನು ಉಲ್ಲಂಘಿಸಿದವರನ್ನು ಜೀವಂತ ಹೂತ ಮತ್ತು ಕೆಲವರನ್ನು ಆನೆಯ ಕಾಲಿನಿಂದ ತುಳಿಸಿದ ಘಟನೆಯೂ ಇದೆ.

❖ ತಮಿಳ್ನಾಡಿನ ತಿರುಮಲೈ ಮತ್ತು ಮೈಸೂರಿನ ಅರಸರ ಮಧ್ಯೆ ನಡೆದ ಒಂದು

ಯುದ್ಧದಲ್ಲಿ ಜನರ ಮೂಗುಗಳನ್ನು ಕತ್ತರಿಸಲಾಯಿತು. ಮೈಸೂರು ರಾಜ ಅದರ ಪ್ರತೀಕಾರಕ್ಕಾಗಿ ತಮಿಳ್ನಾಡಿನ ಮೇಲೆ ಮಾಡಿದ ಧಾಳಿಯಲ್ಲಿ ಜನರ ಮೂಗು ಮತ್ತು ನಾಲಗೆಗಳನ್ನು ಕತ್ತರಿಸಿ ಹಾಕಿದ್ದನು. ಇದಕ್ಕುತ್ತರವಾಗಿ ಅಂದಿನ ತಮಿಳ್ನಾಡಿನ ಆಡಳಿತಗಾರ ಮೈಸೂರಿನ ಮೇಲೆ ಆಕ್ರಮಣ ಮಾಡಿ ತನ್ನ ಶತ್ರುಗಳ ಮೂಗು ಮತ್ತು ನಾಲಗೆಗಳನ್ನು ಕೊಯ್ದು ಹಾಕಿದನು.(ನಾಯ್ಕ ರಾಜರ ಇತಿಹಾಸದ ಪುಸ್ತಕಗಳಿಂದ ಉದ್ಧರಣೆ)

❖ ಮಕ್ಕಳನ್ನು ಬಲಿ ಕೊಡುವುದು, ಮನುಷ್ಯನ ಅಂಗಾಂಗಗಳ ಕಾಣಿಕೆ ಅರ್ಪಿಸುವುದು ಮುಂತಾದ ಸಂಪ್ರದಾಯಗಳು ಇಂದಿಗೂ ನಮ್ಮ ದೇಶದ ಅನೇಕ ಕಡೆ ಬಳಕೆಯಲ್ಲಿವೆ. ಇದು ಕರುಣೆ ಮತ್ತು ದಯೆಯ ಪ್ರತೀಕವೇ?

❖ ಪಾಶ್ಚಾತ್ಯ ಲೋಕದಲ್ಲಿ ಶಿಲುಬೆಗೇರಿಸುವುದು ಒಂದು ಸಾಮಾನ್ಯ ವಿಷಯವಾಗಿತ್ತು. ಏಸುಕ್ರಿಸ್ತರನ್ನು[ಈಸಾ(ಅ)] ಶಿಲುಬೆಗೇರಿಸುವ ಪ್ರಯತ್ನ ನಡೆದಿತ್ತು. ಸಂತ ಪೀಟರನನ್ನು ತಲೆ ಕೆಳಗೆ ಮಾಡಿ ಶಿಲುಬೆಗೇರಿಸಲಾಯಿತು.

❖ ಜಾನ್ ಆಫ್ ಆರ್ಕ್‌ನನ್ನು ಜೀವಂತ ಸುಡಲಾಯಿತು.

❖ ಪ್ರೊಟೆಸ್ಟೆಂಟ್ ಪಂಥ ಸ್ವೀಕರಿಸಿದವರ ತಲೆ ಬುರುಡೆ ಒಡೆದು ಮೆದುಳು ಹೊರ ತೆಗೆಯಲಾಯಿತು ಹಾಗೂ ಅವರನ್ನು ಜೀವಂತ ಸುಡಲಾಯಿತು.

❖ ಕುರಿ ಮಂದೆಗಳಂತೆ ಮನುಷ್ಯರನ್ನು ಆಫ್ರಿಕಾದಿಂದ ಹಿಡಿದು ತಂದು ಯೂರೋಪಿನ ಮಾರುಕಟ್ಟೆಗಳಲ್ಲಿ ಜೀತದಾಳುಗಳಾಗಿ ಹರಾಜು ಮಾಡಲಾಯಿತು. ಇದಾಗಿತ್ತು ಪಶ್ಚಿಮದ ಸಂಸ್ಕೃತಿ.

❖ ಹಿಟ್ಲರನು ಗ್ಯಾಸ್ ಚೇಂಬರ್‌ನಲ್ಲಿ ಅನೇಕರನ್ನು ಕೊಂದು ಹಾಕಿದನು.

❖ ಇಂದಿಗೂ ಭಾರತದ ಅನೇಕ ಭಾಗಗಳಲ್ಲಿ ನಡೆಯುವ ಗಲಭೆಗಳಲ್ಲಿ ಮನುಷ್ಯರನ್ನು ಜೀವಂತ ಸುಡುವ ವರದಿಗಳು ಬರುತ್ತವೆ. ವಲೀಪುರ, ಜೆಮ್ಶೆದ್ಪುರ ಮತ್ತು ಭೇಲ್ಪಾದ ಘಟನೆಗಳು ಇದಕ್ಕೆ ನಿದರ್ಶನಗಳಾಗಿವೆ.

ಈ ರೀತಿ ಲೋಕದ ಪ್ರತಿಯೊಂದು ರಾಷ್ಟ್ರದ ಇತಿಹಾಸವು ಅನ್ಯಾಯ, ದೌರ್ಜನ್ಯಗಳ ಘಟನೆಗಳಿಂದ ಕಳಂಕಿತವಾಗಿರುವುದು ಕಂಡುಬರುತ್ತದೆ. ಅನೇಕ ತತ್ವಾದರ್ಶಗಳ ಬುನಾದಿ ಯಲ್ಲಿ ಮಾನವನು ಅಕ್ರಮ ದೌರ್ಜನ್ಯಗಳನ್ನೆಸಗಿದ್ದಾನೆ. ಅಂತೆಯೇ ಅವನಿಂದ ದಯೆ ಮತ್ತು ಔದಾರ್ಯದ ಪ್ರದರ್ಶನವೂ ಆಗಿತ್ತು. ಪಾಶವೀ ಮತ್ತು ಅನ್ಯಾಕ್ರಮಣಶೀಲ ವಿಚಾರಗಳನ್ನು ಅಳಿಸಿ ಹಾಕಿ ಅವುಗಳ ಸ್ಥಾನದಲ್ಲಿ ನೈಜ ಕರುಣೆಯ ಶಿಕ್ಷಣ ನೀಡುವ ಯಾಥಾರ್ಥ ಧರ್ಮ ಯಾವುದಾದರೂ ಇದ್ದರೆ, ಅದು ಇಸ್ಲಾಮ್ ಮಾತ್ರವಾಗಿದೆ.

ಕೆಲವು ಧರ್ಮಗಳಲ್ಲಿ ದೇವನ ಗುಣಗಳನ್ನು ವಿಂಗಡಿಸಿ ಪ್ರತಿಯೊಂದು ಗುಣದ ಒಬ್ಬ ದೇವನನ್ನು ಕಲ್ಪಿಸಿಕೊಳ್ಳಲಾಯಿತು. ಕೆಲವು ಧರ್ಮಗಳಲ್ಲಿ ದೇವನನ್ನು ನಿರ್ಗುಣ ನೆಂದು ಭಾವಿಸಲಾಯಿತು. ಆದರೆ ಇಸ್ಲಾಮ್ ಧರ್ಮದಲ್ಲಿ ದೇವನು ಸಾದ್ಯಂತ ಕಾರುಣ್ಯ ನಾಗಿ ಕಾಣುತ್ತಾನೆ. ಪ್ರವಾದಿವರ್ಯರ(ಸ) ಆಗಮನವನ್ನೇ ಕಾರುಣ್ಯವೆಂದು ಸಾರಲಾಯಿತು. ಕುರ್‌ಆನಿನ ಅನೇಕ ಕಡೆಗಳಲ್ಲಿ ದೇವನನ್ನು ಕರುಣಾನಿಧಿಯೆಂದೂ ದಯಾಮಯನೆಂದೂ

ಹೇಳಲಾಗಿದೆ. ತನ್ನ ಕರುಣೆಯ ಗುಣದ ಛಾಯೆ ತನ್ನ ದಾಸರಲ್ಲಿಯೂ ಕಾಣಸಿಗಬೇಕೆಂಬುದು ಅಲ್ಲಾಹನಿಗೆ ಅತ್ಯಂತ ಪ್ರಿಯವಾಗಿದೆ.

ಪ್ರತಿಯೊಂದು ಕಾರ್ಯವನ್ನು ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ ಆರಂಭಿಸಬೇಕೆಂಬುದು ಇಸ್ಲಾಮಿನ ಶಿಕ್ಷಣವಾಗಿದೆ. ಇಸ್ಲಾಮಿನಲ್ಲಿರುವ ಸಲಾಮ್ ಹೇಳುವ ಪದ್ಧತಿಯೂ ಕರುಣೆ ಮತ್ತು ಪ್ರೇಮದ ಪ್ರತೀಕವಾಗಿದೆ. ನೈಜ ಮುಸ್ಲಿಮರು ಇತರರ ಮೇಲೆ ಕರುಣೆ-ಅನುಕಂಪ ಉಳ್ಳವರಾಗಿರುತ್ತಾರೆ. ಕುರ್‌ಆನಿನ ಶಿಕ್ಷಣವೂ ಇದುವೇ. ಪ್ರವಾದಿವರ್ಯರ(ಸ) ಚರ್ಯೆಯೂ ಇದುವೇ. ಕೆಲವು ವ್ಯಕ್ತಿಗಳು ಕಾರುಣ್ಯದ ಈ ದಾರಿಯಿಂದ ಜಾರಿ ಹೋದರೆ ಇಸ್ಲಾಮ್ ಅವರಿಗೆ ಅದೇ ಮಾರ್ಗಕ್ಕೆ ಹಿಂತಿರುಗಿ ಬರುವಂತೆ ಆದೇಶಿಸುತ್ತದೆ.

ತುರ್ಕಿಯಲ್ಲಿ ಸುಲ್ತಾನ್ ಸಲೀಮ್ ಎಂಬೋರ್ವ ಅರಸನಿದ್ದ. ಅವನು ತನ್ನ ಅಧೀನವಿರುವವರೊಂದಿಗೆ ಅತ್ಯಂತ ಕಠೋರವಾಗಿ ವರ್ತಿಸುತ್ತಿದ್ದನು. ತನ್ನ ದೇಶದ ಎಲ್ಲ ಭಾಷೆಗಳನ್ನೂ ಎಲ್ಲ ಧರ್ಮಗಳನ್ನೂ ಅಳಿಸಿ ಒಂದೇ ಭಾಷೆ ಮತ್ತು ಒಂದೇ ಧರ್ಮವನ್ನು ಜಾರಿಗೆ ತರಬಯಸಿದ್ದನು. ಆದರೆ ಆಗಿನ ಅತ್ಯುನ್ನತ ಮುಸ್ಲಿಮ್ ವಿದ್ವಾಂಸರಿಂದ ಅದಕ್ಕೆ ತೀವ್ರ ವಿರೋಧ ವ್ಯಕ್ತವಾದುದರಿಂದ ಸುಲ್ತಾನನು ತನ್ನ ಯೋಜನೆಯನ್ನು ಕೈಬಿಡಬೇಕಾಯಿತು.

ಮನೋರಂಜನೆಗಾಗಿ ಪ್ರಾಣಿಗಳನ್ನೂ ಪಕ್ಷಿಗಳನ್ನೂ ಪರಸ್ಪರ ಕಾದಾಡಿಸುವ ಸಂಪ್ರದಾಯ ಇಂದಿಗೂ ಅನೇಕ ರಾಷ್ಟ್ರಗಳಲ್ಲಿವೆ. ಇಸ್ಲಾಮ್ ಅದನ್ನು ತೀವ್ರವಾಗಿ ಖಂಡಿಸಿದೆ.

ಅದೀ ಬಿನ್ ಹಾತಿಮ್ ಇರುವೆಗಳಿಗೆ ಆಹಾರ ಒದಗಿಸಿದರು. ಇದು ಇಸ್ಲಾಮಿೂ ಶಿಕ್ಷಣದ ಪ್ರಭಾವವಾಗಿತ್ತು. "ರಸ್ತೆಯಲ್ಲಿ ನಡೆಯುವ ಹಕ್ಕು ಪ್ರಾಣಿಗಳಿಗೂ ಇದೆ. ಅವುಗಳನ್ನು ತಡೆಯಲಾಗದು" ಇದು ಶೀರಾಝಿಯವರು ಮಾಡಿದ ಘೋಷಣೆ. ಇಂತಹ ಘಟನೆ ಮುಸ್ಲಿಮರ ಇತಿಹಾಸದಲ್ಲಿ ಸಿಗುತ್ತದೆ.

ಒಂದು ಒಂಟೆಯ ಮೇಲೆ ಮೂವರು ಸವಾರರಿದ್ದು ಒಂಟೆಯು ಭಾರದಿಂದ ಬಾಗಿ ಹೋಗಿದ್ದರೆ ಒಬ್ಬ ಸವಾರನನ್ನು ಒತ್ತಾಯಪೂರ್ವಕ ಇಳಿಸಬೇಕೆಂಬ ಆದೇಶ ಇಸ್ಲಾಮಿನಲ್ಲಿದೆ.

ಕರುಣೆಯ ಶಿಕ್ಷಣ ನೀಡುವ ಇಸ್ಲಾಮ್ ಘೋರ ಅಪರಾಧಗಳನ್ನೆಸಗಿದ ಅಪರಾಧಿಗಳಿಗೆ ಕಠಿಣ ಶಿಕ್ಷೆ ನೀಡಬೇಕೆಂದೂ ಆದೇಶಿಸಿದೆ. ಇಸ್ಲಾಮ್ ಖಂಡಿತವಾಗಿಯೂ ಕಳ್ಳನ ಕೈ ಕಡಿಯಬೇಕೆಂದು ಆಜ್ಞಾಪಿಸಿದೆ. ಆದರೆ ಅದರ ಪರಿಣಾಮ ಮತ್ತು ಪ್ರಭಾವಗಳನ್ನು ಪರಿಗಣಿಸಬೇಕಾಗಿದೆ. ಈ ಕಾನೂನು ಜಾರಿಯಲ್ಲಿರುವ ಮುಸ್ಲಿಮ್ ರಾಷ್ಟ್ರಗಳಲ್ಲಿ ಕಳ್ಳತನವು ಬಹಳ ಅಪರೂಪಕ್ಕೆ ಮಾತ್ರ ಸಂಭವಿಸುತ್ತದೆ.

ಅರಬ್ ರಾಷ್ಟ್ರಗಳಲ್ಲಿ ಕೊಲೆಪಾತಕಿಯ ಕತ್ತು ಕಡಿಯಲಾಗುತ್ತದೆ. ಇತರ ರಾಷ್ಟ್ರಗಳಲ್ಲಿ ಗಲ್ಲಿಗೇರಿಸುವ ಅಥವಾ ವಿದ್ಯುತ್ ಕುರ್ಚಿಯಲ್ಲಿ ಕುಳ್ಳಿರಿಸಿ ಮರಣ ಶಿಕ್ಷೆ ನೀಡಲಾಗುತ್ತದೆ. ಗಲ್ಲು ಅಥವಾ ವಿದ್ಯುತ್ ಕುರ್ಚಿಯಲ್ಲಿ ಬಹಳ ಪೀಡೆಯೊಂದಿಗೆ ಜೀವ ಹೋಗುತ್ತದೆ. ಆದುದರಿಂದ ಖಡ್ಗದಿಂದ ಕತ್ತು ಕಡಿಯುವ ಮೂಲಕ ಮರಣ ದಂಡನೆ ನೀಡುವುದಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ.

## 3. ಮುಸ್ಲಿಮರು ಮಂದಿರಗಳನ್ನು ಕೆಡವಿದರೇ?

ಮುಸ್ಲಿಮರು ಹಿಂದೂ ಮಂದಿರಗಳನ್ನು ಕೆಡವಿದರೆಂಬುದು ಒಂದು ನಿರಾಧಾರ ಆರೋಪ.

ಇಂತಹ ಆರೋಪಗಳನ್ನು ಹೊರಿಸುವಾಗ ಇಂತಹದೇ ಕೃತ್ಯಗಳನ್ನು ಭಾರತದಲ್ಲಿ ಇತರರೂ ಮಾಡಿದ್ದಾರೆಂಬುದನ್ನು ನಾವು ಮರೆಯುತ್ತೇವೆ. ನಮ್ಮಲ್ಲಿ ಸವನರ ಮಂದಿರ ಗಳನ್ನು ಕೆಡವಲಾಗಿತ್ತು. ನಾಗಪಟ್ಟಿಮ್‌ನ ಮೂರ್ತಿಗಳನ್ನು ದೋಚಲಾಗಿತ್ತೆಂಬುದನ್ನೂ ಅಲ್ಲಿದ್ದ ಚಿನ್ನವನ್ನು ತಿರುಮಂಗಯಿಯ ಆಷ್ವಾರರು ಕೊಳ್ಳೆ ಹೊಡೆದರೆಂಬುದನ್ನೂ ನಾವು ಮರೆತಿದ್ದೇವೆ.

ಮುಸ್ಲಿಮರು ಮಂದಿರಗಳನ್ನು ಕೆಡವಿದರೆಂದು ನಾವು ಹೇಳುತ್ತೇವೆ. ಆದರೆ ಅವರು ಹಿಂದೂ ಮಂದಿರಗಳಿಗೆ ಜಮೀನು ದತ್ತಿ ನೀಡಿದರೆಂಬುದನ್ನು ನಾವು ಸ್ಮರಿಸುವುದಿಲ್ಲ. ಮುಸ್ಲಿಮರು ಕೆಲವು ಮಂದಿರಗಳನ್ನು ಕೆಡವಿದ್ದರೆ ಅದರ ಕಾರಣಗಳು ಬೇರೆಯೇ ಆಗಿದ್ದುವು. ಇತರರ ಆರಾಧನಾಲಯಗಳನ್ನೂ ಮಂದಿರಗಳನ್ನೂ ಕೆಡವಬೇಕೆಂದೂ ನಾಶ ಗೊಳಿಸಬೇಕೆಂದೂ ಇಸ್ಲಾಮ್ ಬೋಧಿಸಿಲ್ಲ.

ಈ ಬಗ್ಗೆ ಓರ್ವ ಮಹನೀಯರು "ಮುಸ್ಲಿಮರು ಮಂದಿರಗಳನ್ನು ಕೆಡವಿದರು ಮತ್ತು ಮೂರ್ತಿಗಳನ್ನು ಕಡಿದರು ಎಂದು ಭಾರತೀಯ ಇತಿಹಾಸದಿಂದ ತಿಳಿದು ಬರುತ್ತದೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದ್ದಾರೆ.

ಜನರ ಕೈಯಲ್ಲಿರುವ ಭಾರತದ ಇತಿಹಾಸವು ಯಥಾರ್ಥದಲ್ಲಿ ನೈಜ ಹಾಗೂ ಸಂಶೋಧನೆಯ ಆಧಾರದಲ್ಲಿ ಕ್ರೋಢೀಕರಿಸಿದ ಇತಿಹಾಸವಲ್ಲ. ಮುಸ್ಲಿಮರು ಮತ್ತು ಅನ್ಯ ಧರ್ಮದವರ ಮಧ್ಯೆ ಹಗೆತನ ಬೆಳೆಸಲಿಕ್ಕಾಗಿ ಪಶ್ಚಿಮದ ಕಿಡಿಗೇಡಿಗಳು ಈ ಇತಿಹಾಸವನ್ನು ಬರೆದರು. ಒಂದು ವೇಳೆ ಮುಸ್ಲಿಮರು ಮಂದಿರಗಳನ್ನು ಕೆಡವಿದರು ಮತ್ತು ಮೂರ್ತಿ ಗಳನ್ನು ಕಡಿದರೆಂಬುದು ರುಜುವಾತಾದರೂ ಅದಕ್ಕೆ ನನ್ನ ಬಳಿ ಇರುವ ಉತ್ತರವೇನೆಂದರೆ, ಇತರ ಧರ್ಮಗಳ ಮಂದಿರಗಳನ್ನು ಕೆಡಹುವ ಮತ್ತು ಅವುಗಳನ್ನು ಧ್ವಂಸಗೊಳಿಸುವ ಅನುಮತಿ ಇಸ್ಲಾಮ್ ಧರ್ಮದಲ್ಲಿ ಸರ್ವಥಾ ಇಲ್ಲ. ಈ ಕೃತ್ಯವೆಸಗಿದವರು ಗಜನಿ ಮಹ್ಮೂದ್ ಆಗಲಿ, ಅವರ ಸೇನಾ ನಾಯಕರಾಗಲಿ, ಇಸ್ಲಾಮಿಗೂ ಅದಕ್ಕೂ ಯಾವ ಸಂಬಂಧವೂ ಇಲ್ಲ. ವಸ್ತುತಃ ಮುಸ್ಲಿಮೇತರರ ಆರಾಧನಾಲಯಗಳ ಸಂರಕ್ಷಣೆಯು ಇಸ್ಲಾಮೀ ರಾಷ್ಟ್ರದ ಕರ್ತವ್ಯವಾಗಿದೆ.

ಮೂರ್ತಿ ಪೂಜೆ ತಪ್ಪು. ಇಸ್ಲಾಮ್ ಜನರಲ್ಲಿ ಈ ಪ್ರಜ್ಞೆಯನ್ನು ಮೂಡಿಸುತ್ತದೆ. ಅದಕ್ಕಾಗಿ ಅದು ಸ್ಪಷ್ಟ ಪುರಾವೆಗಳನ್ನು ನೀಡುತ್ತದೆ. ಧರ್ಮದ ವಿಷಯದಲ್ಲಿ ಯಾವುದೇ ಬಲಾತ್ಕಾರ ಸಲ್ಲದು. ಇಸ್ಲಾಮ್ ಇದನ್ನು ಸ್ಪಷ್ಟ ಮಾತುಗಳಲ್ಲಿ ಘೋಷಿಸಿದೆ. ಜನಮನಗಳು ಬಹುದೇವಾರಾಧನೆ ಮತ್ತು ದೇವ ನಿಷೇಧದ ಕೆಡುಕಿನಿಂದ ಪವಿತ್ರವಾಗಬೇಕು ಮತ್ತು ಅದರಲ್ಲಿ ಸತ್ಯದ ಬೆಳಕು ಪಸರಿಸಬೇಕೆಂದು ಇಸ್ಲಾಮ್ ಬಯಸುತ್ತದೆ. ಅದಕ್ಕಾಗಿ ಅದು

ಬೋಧನೆ ಮತ್ತು ಪ್ರಚಾರದ ಮಾರ್ಗವನ್ನು ಅವಲಂಬಿಸುತ್ತದೆ. ಬಲಾತ್ಕಾರ ಒತ್ತಡದ ಮಾರ್ಗವು ಅದರ ಸ್ವಭಾವಕ್ಕೆ ತೀರಾ ವಿರುದ್ಧವಾದುದು.

ಪ್ರವಾದಿವರ್ಯರು ಕಅಬಾವನ್ನು ಮೂರ್ತಿಗಳಿಂದ ಮುಕ್ತಗೊಳಿಸಿದರು. ಇದು ಒಂದು ಐತಿಹಾಸಿಕ ಸತ್ಯ. ಆದರೆ ಕಅಬಾ ಅಲ್ಲಾಹನ ಭವನವಾಗಿತ್ತೆಂಬ ವಾಸ್ತವಿಕತೆಯನ್ನು ಮರೆಯಲಾಗದು. ಜನರು ತಮ್ಮ ಬಂಡಾಯ ನೀತಿಯಿಂದ ಅದನ್ನು ಮೂರ್ತಿಗಳ ಕೇಂದ್ರವನ್ನಾಗಿ ಮಾಡಿದ್ದರು. ಕಅಬಾವನ್ನು ಕೇವಲ ಅಲ್ಲಾಹನ ಆರಾಧನೆಗಾಗಿ ನಿರ್ಮಿಸಲಾಗಿತ್ತೆಂಬುದನ್ನು ಅರೇಬಿಯಾದ ಮೂರ್ತಿಪೂಜಕರೂ ಒಪ್ಪುತ್ತಿದ್ದರು. ಅನಂತರದ ಕಾಲಗಳಲ್ಲಿ ಕಅಬಾದಲ್ಲಿ ಅನೇಕ ವಿಗ್ರಹಗಳನ್ನು ತಂದು ಪ್ರತಿಷ್ಠಾಪಿಸಲಾಯಿತು. ಇದು ತೀರಾ ತಪ್ಪಾಗಿತ್ತು. ಈ ವಿಗ್ರಹಗಳನ್ನು ಪ್ರವಾದಿವರ್ಯರು ಕಅಬಾದಿಂದ ನೀಗಿಸಿ, ಅದನ್ನು ಹಿಂದಿನಂತೆ ಕೇವಲ ಅಲ್ಲಾಹನ ಆರಾಧನೆಗೆ ಮೀಸಲುಗೊಳಿಸಿದರು.

ಪ್ರವಾದಿವರ್ಯರು ಕ್ರೈಸ್ತರ ಅಥವಾ ಯಹೂದಿಗಳ ಪ್ರಾರ್ಥನಾಲಯಗಳನ್ನು ಕೆಡವಿದ ಒಂದೇ ಒಂದು ಉದಾಹರಣೆಯನ್ನು ನೀಡಲು ಸಾಧ್ಯವಿಲ್ಲ.

## 4. ಇಸ್ಲಾಮಿನ ಅಭ್ಯುದಯ ಮತ್ತು ಖಡ್ಗ

ಇಸ್ಲಾಮ್ ಖಡ್ಗದ ಬಲದಿಂದ ಪಸರಿಸಿತೆಂದೂ ಲೋಕದಲ್ಲಿ ಅದು ತನ್ನ ವೈಯಕ್ತಿಕ ಗುಣಗಳಿಂದಾಗಿ ಪಸರಿಸಲಿಲ್ಲವೆಂದೂ ಒಂದು ಆಕ್ಷೇಪವಿದೆ.

ಇದು ಬರೇ ಆರೋಪ ಮಾತ್ರ. ಇದರ ಬೆಂಬಲಕ್ಕೆ ಯಾವುದೇ ಪುರಾವೆ ಇಲ್ಲ. ಕುರ್‌ಆನ್ ಸ್ಪಷ್ಟ ಮಾತುಗಳಲ್ಲಿ ಬಲಾತ್ಕಾರ ಮತ್ತು ಒತ್ತಡದ ಧರ್ಮ ಪ್ರಚಾರವನ್ನು ತಡೆದಿದೆ.

ಇಸ್ಲಾಮಿನ ಮೇಲೆ ಆರೋಪ ಹೊರಿಸುವವರು ಲೋಕ ಚರಿತ್ರೆಯನ್ನು ಮರೆತು ಬಿಡುತ್ತಾರೆ. ಅವರ ಬಾಯಿ ಕೇವಲ ಇಸ್ಲಾಮಿನ ವಿರುದ್ಧ ನಿರಾಧಾರ ಆರೋಪ ಹೊರಿಸಲು ತೆರೆಯುತ್ತದೆ. ಲೋಕ ಚರಿತ್ರೆಯನ್ನು ಅವಲೋಕಿಸಿದರೆ ಅನೇಕ ಸರಕಾರಗಳು ತಂತಮ್ಮ ಮತ-ಧರ್ಮವನ್ನು ಶಕ್ತಿಯ ಬಲದಿಂದ ಪ್ರಚಾರ ಮಾಡಿರುವುದು ಕಂಡು ಬರುತ್ತದೆ. ದೂರ ಹೋಗುವ ಅಗತ್ಯವಿಲ್ಲ. ಭಾರತದಲ್ಲಿ ಬೌದ್ಧ ಧರ್ಮದ ಇತಿಹಾಸವನ್ನು ಅವಲೋಕಿಸೋಣ. ಇಲ್ಲಿ ಬೌದ್ಧ ಧರ್ಮವು ಅಶೋಕ ಮತ್ತು ಹರ್ಷರ ಆಡಳಿತ ಬಲದಿಂದ ಹರಡಿತು. ಸವನರ ಪಂಥದ ಇತಿಹಾಸವೂ ಇದುವೇ. ಒಂದು ಕಾಲದಲ್ಲಂತೂ ಭಾರತದ ಎಲ್ಲ ರಾಜ-ಮಹಾರಾಜರೂ ಸವನರ ಪಂಥಕ್ಕೆ ಸೇರಿದವರಾಗಿದ್ದರು. ಆಗ ಭಾರತದಲ್ಲಿ ಇದೇ ಪಂಥವು ವ್ಯಾಪಿಸಿತ್ತು. ಆ ಬಳಿಕ ವೈದಿಕ ಧರ್ಮದ(ಹಿಂದೂ ಮತ) ಕಾಲ ಬಂತು. ಅದು ತನ್ನ ಸರಕಾರದ ಬಲದಿಂದ ಇತರ ಧರ್ಮದವರನ್ನು ಕೊನೆಗೊಳಿಸಿತು. ಜನರನ್ನು ಅದಕ್ಕಾಗಿ ಗಲ್ಲಿಗೂ ಏರಿಸಲಾಯಿತು. ಇದುವೇ ಭಾರತವನ್ನು ಒಂದು ಹಿಂದೂ ರಾಷ್ಟ್ರವನ್ನಾಗಿ ಮಾಡಲು ಅನುಸರಿಸಲಾದ ಮಾರ್ಗ.

ಇಷ್ಟು ಮಾತ್ರವಲ್ಲ, ಭಾರತದ ಅರಸರು ಸೇನಾ ಆಕ್ರಮಣಗಳನ್ನು ನಡೆಸಿ ಇತರ ರಾಷ್ಟ್ರಗಳಲ್ಲಿಯೂ ತಮ್ಮ ಧರ್ಮವನ್ನು ಪಸರಿಸಿದರು. ಜಾವಾ, ಸುಮಾತ್ರಾ, ಕೆಂಬೋಡಿಯಾಗಳಲ್ಲಿ ಇಂದಿಗೂ ಹಿಂದೂ ಧರ್ಮದ ಕುರುಹುಗಳು ಮತ್ತು ವಿಗ್ರಹಗಳು ಕಾಣಸಿಗುತ್ತವೆ. ಕ್ರೈಸ್ತ ಧರ್ಮಾವಲಂಬಿಗಳಾದ ಆಡಳಿತಗಾರರು ಇತರ ದೇಶಗಳ ಮೇಲೆ ಸೈನಿಕ ಆಕ್ರಮಣ ಮಾಡಿದಾಗ ಅಲ್ಲಿ ಅವರು ಕ್ರೈಸ್ತ ಧರ್ಮಕ್ಕೆ ಇನ್ನಷ್ಟು ಪ್ರಚಾರ ದೊರಕಿಸಲು ಪ್ರಯತ್ನಿಸಿದರು.

ಒಂದು ವೇಳೆ ಮುಸ್ಲಿಮ್ ಅರಸರೂ ಇಸ್ಲಾಮಿನ ಪ್ರಚಾರಕ್ಕೆ ತಮ್ಮ ಪ್ರತಿಷ್ಠೆ ಪ್ರಭಾವಗಳನ್ನು ಉಪಯೋಗಿಸಿದ್ದರೆ ಅದು ಇಸ್ಲಾಮನ್ನು ಹಳಿಯಲು ಬಳಸಬಹುದಾದಷ್ಟು ಮಹಾಪರಾಧವೆನಿಸದು. ಇಂದಿನ ವಿಜ್ಞಾನ ಯುಗದಲ್ಲೂ ಇಸ್ಲಾಮ್ ತನ್ನ ಶಕ್ತಿಯಿಂದಲ್ಲ ಖಡ್ಗದ ಶಕ್ತಿಯಿಂದ ಹರಡಿತೆಂಬ ಆರೋಪ ಆಗಾಗ ಕೇಳಿಬರುತ್ತಿದೆ. ಇಂತಹ ಆರೋಪ ಹೊರಿಸುವವರಲ್ಲಿ ತಮ್ಮ ಆಡಳಿತವನ್ನು ಬಂದೂಕಿನ ನಳಿಗೆಯ ಮೂಲಕ ಭದ್ರಪಡಿಸುವ ಮತ್ತು ತಮ್ಮ ತತ್ವಾದರ್ಶವನ್ನು ಪ್ರಚಾರಪಡಿಸುವ ದುಷ್ಕ್ರಮ ನಡೆಸುವ ಆಡಳಿತಗಾರರೂ ಸೇರಿಕೊಂಡಿದ್ದಾರೆಂಬುದು ಆಶ್ಚರ್ಯದ ಸಂಗತಿ. ಆದರೆ ಅವರ ದೃಷ್ಟಿ ಅಂತರ್ಮುಖವಾಗಿ ಹರಿಯುವುದಿಲ್ಲ.

ಇಂದಿನ ಕಾಲದಲ್ಲಿ ಧರ್ಮದ ವಿಷಯದಲ್ಲಿ ಬಲಾತ್ಕಾರ ಮತ್ತು ಒತ್ತಡಗಳ ಪ್ರಶ್ನೆಯೇ ಉದ್ಭವಿಸುವುದಿಲ್ಲ. ತನ್ನ ವಿಶ್ವಾಸ ಆಚಾರಗಳಲ್ಲಿಯೇ ಉಳಿಯುವ ಮತ್ತು ಇತರರಿಗೆ ಅದನ್ನು ಪ್ರಚಾರ ಮಾಡುವ ಹಕ್ಕು ಪ್ರತಿಯೊಬ್ಬನಿಗೂ ಇದೆ. ಇಂದಿನ ಕಾಲದಲ್ಲಿ ಇಸ್ಲಾಮ್ ಸ್ವೀಕರಿಸುವವರ ಸಂಖ್ಯೆಯೇನೂ ಕಡಿಮೆ ಇಲ್ಲ. ಅವರನ್ನು ಯಾವ ಖಡ್ಗದ ಬಲದಿಂದ ಮಣಿಸಲಾಯಿತು? ಅದು ಕಬ್ಬಿಣದ ಖಡ್ಗವಲ್ಲ. ಯಥಾರ್ಥ ಮತ್ತು ಸತ್ಯದ ಆಕರ್ಷಣೆಯೇ ಜನರನ್ನು ತನ್ನೆಡೆಗೆ ಆಕರ್ಷಿಸುತ್ತಿದೆ.